ವಿಜಯ ಮಹಾಂತೇಶ ಗ್ರಂಥ ಮಾಲೆ:

ಕೋಟೆಕಲ್ಲ (ಕಮತಗಿ)

# ಶ್ರೀ ಹತ್ತನೆಯ ಹುಚ್ಚೇಶ್ವರ

(ಜೀವನ ಚರಿತ್ರೆ)



ಲೇಖಕರು:
ಕಲ್ಲೂರ ಸಂಗಣ್ಣ, ಕನ್ನಡ ವಿದ್ವಾನ್; S. T. C.
ಅಧ್ಯಾಪಕ: ವ್ಹಿ. ಎಂ. ಹೈಸ್ಕೂಲ, ಹುನಗುಂದ



ಪ್ರಥಮ ಮುದ್ರಣ: ೧೦೦೦



ಕ್ರಿ. ಶ. ೧೯೫೭ ] [ ಬೆಲೆ: ೦-೪-೦

ಪ್ರಕಾಶಕರು:

**ಶ್ರೀ. ಮ. ಪ್ರ. ಸ್ವ. ಹುಚ್ಚಪ್ಪಯ್ಯ ಸ್ವಾಮಿಗಳು**

**ಕೋಟೆಕಲ್ಲ (ಕಮತಗಿ)**



ಪ್ರಕಾಶನ ಸ್ಥಳ:

**ಕಮತಗಿ ಶ್ರೀ ಹುಚ್ಚಪ್ಪಯ್ಯನವರ ವಿರಕ್ತಮಠ**

ಪ್ರಕಾಶನ ದಿನ:

**ಪಟ್ಟಾಭಿಷೇಕ ಮಹೋತ್ಸವ: ಶಕ ೧೮೭೮ ಮಾಘ ಶು. ೧೪**

**ಬುಧವಾರ ದಿ. ೧೩-೨-೫೭**

ಮುದ್ರಕರು:

**ಶ್ರೀ. ಎಂ. ಗಾರವಾಡಮಠ,**

**[illegible]: ಶ್ರೀ ಶಿವಶಕ್ತಿ ಮುದ್ರಣಾಲಯ, ಬಾಗಲಕೋಟೆ.**

# ಮುನ್ನುಡಿ

ನಮ್ಮ ವಿದ್ಯಾಗುರು-ಸಮಾಜಗುರು ಲಿಂ. ಶ್ರೀ ೧೦ ನೆಯ ಹುಚ್ಚೇಶ್ವರನ ಸೇವಾ ನಿರೀಕ್ಷಣೆಯಲ್ಲಿ ಇದ್ದಾಗ, ಕಮತಗಿ ಶೈವಪವರ ಪರವಾಗಿ ಶ್ರೀ ಶೆಟ್ಟರ ಚನ್ನಮಲ್ಲಪ್ಪನವರಿಂದ ಕರೆ ಬಂದಮೇರೆಗೆ, ನಾವು ಕಮತಗಿಗೆ ಬಂದೆವು. ಕಮತಗಿ ಮಠದ ಜೀರ್ಣೋದ್ಧಾರ, ಕೋಟೇಕಲ್ಲಿನ ರಥನಿರ್ಮಾಣ, ಪೂಜ್ಯ ಅಯ್ಯಪ್ಪಯ್ಯ ದೇವರ ಪಟ್ಟಾಭಿಷೇಕ, ಶ್ರೀ ಹುಚ್ಚೇಶ್ವರ ಯಾತ್ರೆ, ಮತ್ತು ಶ್ರೀ ಹುಚ್ಚೇಶ್ವರನ ಮೇಲಿನ ಗ್ರಂಥಗಳ ಪ್ರಕಾಶನ— ಈ ಐದು ಕಾರ್ಯಗಳ ಹೊಣೆಹೊತ್ತು, ಪೀಠದ ಎಲ್ಲ ಊರುಗಳ ಶೈವಪವರನ್ನು ಮುಂದಿಟ್ಟುಕೊಂಡು, ಗಂಗಾವತಿ ಶ್ರೀ ಶ್ರೀಗಳವರ ಸಹಕಾರ ಪಡೆದು, ಮರಿದೇವರೊಂದಿಗೆ, 'ನಿಧಿ' ಸಂಗ್ರಹಿಸಿ, ಗುರುವಿನ ಕೃಪಾಬಲದಿಂದ ಮೊದಲಿನ ಮೂರು ಕಾರ್ಯಗಳನ್ನು ನೆರವೇರಿಸಿದೆವು; ನಾಲ್ಕನೆಯದನ್ನು ನಾಳೆ ನೆರವೇರಿಸುವೆವು.

ಕೊನೆಯದಾದ ಗ್ರಂಥ ಪ್ರಕಾಶನದ ಅಂಗವಾಗಿ, ಶ್ರೀ ಕಬ್ಬೂರ ಸಂಗಣ್ಣನವರು ಬರೆದ **ಶ್ರೀ ಹತ್ತನೆಯ ಹುಚ್ಚೇಶ್ವರ** ಎಂಬ ಪುಸ್ತಕದ ಪ್ರಕಟನೆಗೂ ಅನುವು ಮಾಡಿಕೊಡಲಾಯಿತು. ಪುಸ್ತಕವು ಪುಟ್ಟದಾದರೂ, ಅದರಲ್ಲಿ ಹುಚ್ಚೇಶ್ವರನ ವ್ಯಕ್ತಿತ್ವವು ಚೆನ್ನಾಗಿ ಚಿತ್ರಿತವಾಗಿದ್ದು, ಅದು 'ಸ್ವಲ್ಪದರಲ್ಲಿ ಸ್ವಾರಸ್ಯ' ಎಂಬಂತಿದೆ. ಹತ್ತು ಹತ್ತು ಅಕ್ಷರದ ತಲೆಬರಹಗಳನ್ನು ಹೊತ್ತುನಿಂತ ಹತ್ತು ಪ್ರಕರಣಗಳುಳ್ಳ ಪುಸ್ತಕವು, ಹತ್ತನೆಯ ದಿನದ ವಿಶೇಷ ಕಾರ್ಯಕ್ರಮದ ಸಂದರ್ಭದಲ್ಲಿ ಪ್ರಕಟವಾದುದು ತಾನೇ ಆನಂದದ ಸಂಗತಿಯಾಗಿದೆ. ಹುಚ್ಚೇಶ್ವರನ ಜೀವನ ಸಂದೇಶವು ಭಕ್ತರ ಮನೆ ಮನೆಗೂ ಮುಟ್ಟಲಿ, ಹೃದಯವನ್ನು ತಟ್ಟಲಿ; ಎಲ್ಲರ ಜೀವನದಲ್ಲಿ ನೇಹ-ನೆಮ್ಮದಿಗಳು ಹುಟ್ಟಲಿ - ಎಂಬುದೇ ನಮ್ಮ ಮುಖ್ಯ **ಉದ್ದೇಶ.**

**ಬೀಡು:- ಕಮತಗಿ**
ದಿ. ೧೩—೩—೧೯೫೭

**ಉದ್ದೇಶಿ ಸ್ವಾಮಿಗಳು**
**ಉದ್ದೇಶಿಮಠ, ಜಮಖಂಡಿ.**

# ಅರಿಕೆ.

ಆಧುನಿಕ ಮಹಾನುಭಾವರ ವ್ಯಕ್ತಿತ್ವದ ಪರಿಚಯವಾಗಲಿ. ಕೋಟೀಕಲ್ಲ (ಕಮತಗಿ) ಪೀಠದ ಪ್ರಚಾರವಾಗಲಿ ಎಂಬ ದೃಷ್ಟಿಯಿಂದ ಬರೆದ ಈ ಚಿಕ್ಕ ಪುಸ್ತಕದ ಪ್ರಚಾರಕ್ಕೆ, ಜಮಖಂಡಿ ಹಾಗೂ ಗಂಗಾವತಿ ಶ್ರೀಶ್ರೀಗಳವರ ನೇತೃತ್ವದಲ್ಲಿ; ಪೀಠಸ'೧೨'ನೆಯ ಸ್ವಾಮಿಗಳಾದ ಶ್ರೀ ಮ. ಪ್ರ. ಸ್ವ. **ಹುಚ್ಚಪ್ಪಯ್ಯನವರ** ಶುಭಾಶೀರ್ವಾದವೆಂದು, **ಕಮತಗಿ,ದೈವದವರು** ಶ್ರೀ ಕೊಪ್ಪ ಕಿಡಿಯಪ್ಪನವರ ಮುಖಾಂತರ **೧೫೧ ರೂ.**ಯನ್ನು ನೀಡಿದುದಕ್ಕಾಗಿ,ನಾನು ಆ ದೈವದವರಿಗೆ ಚಿರಋಣಿಯಾಗಿರುವೆ. ಪುಸ್ತಕ ಬರೆಯುತ್ತಿದ್ದಾಗ ನನಗೆ ಯಾವುದೇ ಅನುಕೂಲತೆಯನ್ನೊದಗಿಸಿಕೊಟ್ಟ ಯಾವತ್ತೂ ಮಹಾಜನರಿಗೂ ನಾನು ತುಂಬ ಆಭಾರಿಯಾಗಿರುವೆ.

ಹುನಗುಂದ
ದಿ. ೧೩—೨—೧೯೫೭

ಕಲ್ಲೂರ ಸಂಗಣ್ಣ

# ಪರಿವಿಡಿ.

॥ ಶ್ರೀ ವಿಜಯ ಮಹಾಂತೇಶ ಪ್ರಸನ್ನ ॥

ಕೋಟೆಕಲ್ಲ (ಕಮತಗಿ)

# ಶ್ರೀ ಹತ್ತನೆಯ ಹುಚ್ಚೇಶ್ವರ

(ಕಾಶೀ ಸ್ವಾಮಿಗಳು)

## ೧ ಕೋಟೆಕಲ್ಲು ಪೀಠದಡಿಗಲ್ಲು

ಪ್ರಕೃತಿ ಶ್ರೀ, ಲೋಕಶ್ರೀ, ಆತ್ಮಶ್ರೀ— ಹೀಗೆ ಒಂದೆ ಎರಡೆ, ಎಲ್ಲ ಸಿರಿಗೆ ತವರುಮನೆಯಂತಿರುವ ಬೆಟ್ಟವೆ **'ಶ್ರೀಶೈಲ.'** ಮಂಗಲ ಪರ್ವತ. ಪುಣ್ಯಾಗಣ್ಯ ಪ್ರದೇಶ. ನಿರ್ವಾಣ ಸಾಧನೆಗಾಗಿ, 'ನಿರ್ವಾಣೇಶ್ವರ ಗುಹೆ' ಯಲ್ಲಿ ಅನುಷ್ಠಾನಕ್ಕೆ ಕುಳಿತ ಶಿವಯೋಗಿಯೊಬ್ಬರು ಆ ಗವಿಯೊಳಗಿಂದ ಹೊರಬಿಸ್ದು ನೆರೆಯ ಸಾಧು-ಸಿದ್ಧರನ್ನು ಆಶೀರ್ವದಿಸಿ, ಮಲ್ಲಿಕಾರ್ಜುನನ ವರದ ಹಸ್ತ ಪಡೆದುಕೊಂಡು, ಹಂಪೆಯ ವಿರೂಪಾಕ್ಷನ ಕೃಪೆಗೂ ಪಾತ್ರ ರಾಗಿ, ಆನೆಗುಂದಿ ದೊರೆಯ ಸೀಮೆಯನ್ನು ತೊರೆದು, ಹಾದಿಯಲ್ಲಿ ಕಳ್ಳ ರನ್ನು ಉದ್ಧರಿಸಿ, ತುಡುಗ-'ಲಿಂಗಯ್ಯ'ನನ್ನೆ ತಮ್ಮ ಶಿಷ್ಯನೆಂದು ಸ್ವೀಕರಿಸಿ, 'ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚ ರಾತ್ರಿ' ಎಂಬ ತತ್ವದಂತೆ ಸಂಚರಿ ಸುತ್ತ, ಕೊನೆಗೆ ವಿಜಾಪೂರ ಸೀಮೆಯಲ್ಲಿನ 'ಹೆಬ್ಬಳ್ಳಿ' ಗ್ರಾಮದ ಬಳಿ **'ಮಲಾಪಹಾರಿ'** ನದಿಯ ದಂಡೆಗೆ ಬಂದು, ಅಲ್ಲೊಂದು 'ಆಶ್ರಮ' ಕಟ್ಟಿಕೊಂಡು ಕೆಲ ದಿನ ಇದ್ದು, ಶರಣ- 'ಬಿಷ್ಟಪ್ಪ'ನನ್ನು ಅನುಗ್ರಹಿಸಿ, ಶಿಷ್ಯ ಲಿಂಗಯ್ಯನನ್ನೊಡಗೊಂಡು, ಪೂರ್ವಾಭಿಮುಖವಾಗಿ ಹೊರಟು, ಮಲಾಪಹಾರಿಯ ತೀರದ ಗುಂಟ ಅಲೆಯುತ್ತ, ಮುಂದೆ ಅದೇ ಹೊಳೆ ಹಿಡಿದು ಉತ್ತರಕ್ಕೆ ಹೊರಳಿ ನಡೆದು, ಕಮತಗಿ ಹತ್ತಿರದ್ದ ಕೋಟೆಕಲ್ಲ ದೇಸಾಯಿ ಶಿವನಪ್ಪ ನಾಯಕನ ತೋಟದಲ್ಲಿ ಅನುಷ್ಠಾನಕ್ಕೆ ಕುಳಿತರು.

ಕಮತಗಿ ಶ್ರೀ ಹುಚ್ಚಪ್ಪಯ್ಯನವರ ಮಠದಲ್ಲಿ ದೊರೆತ 'ಕಂಚಿನ ಪತ್ರ'ದ ಆಧಾರದಿಂದ ಹೇಳುವದಾದರೆ, "ನಿರ್ವಾಣದೇವರು ಯೋಗ ಸಾಧನೆಯಿಂದ ಮೂರು ತಿಂಗಳು ದಿವಸದಲ್ಲು, ಹಾಲು-ತುಪ್ಪ-ಸಕ್ಕರೆ ಸಲಿಸಿಕೊಂಡು, ಆಸನ ಬಲಿದು ಇದ್ದರು. ಅಂಗೈಯೊಳಗೆ ಲಿಂಗವ ಧರಿಸಿ, ಕಂಚಿನ ಕಟಿಸೂತ್ರ ಕೈಪವ ಧರಿಸಿದ್ದರು. ಎಡಮುರಿ ಶಂಖ, ಬಲಮುರಿ ಬೆತ್ತ, ಮಸ್ತಕದಲ್ಲಿ ಏಕ ಮುಖದ ರುದ್ರಾಕ್ಷಿಯ ಧರಿಸಿ, ಜಡೆಯು ಸುತ್ತಿ ಕೊಂಡಿದ್ದರು. ಬೂದಿಪೂಸಿ, ಶಕ ೧೫೦೦ ಶ್ರೀ ಮುಖನಾಮ ಸಂವತ್ಸರ ದಲ್ಲಿ ಆಸನ ಬಲಿದಿದ್ದರು."

ಒಂದು ದಿನ ಲಿಂಗಯ್ಯ ವಾಡಿಕೆಯಂತೆ, ಕಮತಗಿಗೆ ಕಂಡೇ ಭಿಕ್ಷಕ್ಕೆ ಹೋಗಿದ್ದನು. ಇತ್ತ ನಿರ್ವಾಣದೇವರು ಶಿವಯೋಗ ಸಮಾಧಿಯಲ್ಲಿ ವೈಮರೆತರು. ಅಂದು, "ನಿಜ ಶ್ರಾವಣ ಸೋಮವಾರ-ಶುದ್ಧ--ಷಷ್ಠಿ ಹಸ್ತಾ ನಕ್ಷತ್ರ, ಪುನರ್ವಸು ಮಳೆ ಆ ವರ್ಷ ಘನವಾಯಿತು." ಹೊಳೆ ಬರುವ ಸಪ್ಪಳ, ಹೊರಸೂಸಿ ಬರುವ ಲಕ್ಷಣ. "**ಹೊಳೆ** ಬಂದಿದೆ! **ಹುಚ್ಚ** ಸ್ವಾಮಿಗಳೇ, ಏಳಿರಿ, ಏಳಿರಿ!!" ಎಂದು ತೋಟದ ಆಳುಗಳು ಕೂಗುತ್ತ ಕಾಲಿಗೆ ಬುದ್ಧೀ ಹೇಳಿದರು. ಹೊಳೆಯು ಲೆಕ್ಕೇಮೆಳೆ ಹೊಕ್ಕು, ತೋಟದ ನಡುವೆ ಹಾಯ್ದಿತು. "ಪಾಪ **ಹೊಳೆ** ಹಾಯ್ದು **ಹುಚ್ಚ** ಸ್ವಾಮಿಗಳು ಸತ್ತುಹೋದರು!" ಎಂದು ಮಂದಿ ಮರಗಿದರು.

ಸ್ವಾಮಿಗಳು ಹೊಳೆ ಮುಳುಗಿ ಹೋದರೆಂಬ ಸುದ್ದಿಕೇಳಿ, ದೇಸಾಯಿ ಶಿವನಪ್ಪನು ಅದೇ ಹಳವಂಡದಲ್ಲಿ ಮಲಗಿದಾಗ, ಅವನ ಕನಸಿನಲ್ಲಿ 'ಶಿವಣ್ಣಾ, ನಾವು ಆನಂದದಿಂದಿರುವೆವು; ನಾಳೆ ದರ್ಶನಕ್ಕೆ ಬಾ' ಎಂದು ಯಾರೋ ಹೇಳಿದಂತಾಯಿತು. ಮರುದಿನ ಅವನು ಕಮತಗಿಗೆ ಬಂದು, ಹೊಳೆಯಿಳಿದ ಮೇಲೆ, ಸ್ವಾಮಿಗಳು ಸಮಾಧಿಗೆ ಕುಳಿತ ಸ್ಥಳವನ್ನು ಗೊತ್ತುಹಚ್ಚಿ, ಅಲ್ಲಲ್ಲಿ ಗೆಬರಿಸಿ ನೋಡುತ್ತಿದ್ದಾಗ, ಒಬ್ಬನ ಕೈಗೆ ಜಡೆ ಹತ್ತಿದವು. ಸುತ್ತಲಿನ ಮಂಡು ತೆಗೆಯಿಸಿ ನೋಡುತ್ತಾರೆ. ಕೈಮುಗಿದು, ಕಣ್ಮುಚ್ಚಿ ಸ್ವಸ್ಥವಾಗಿ ಕುಳಿತ ಮಹಾವ್ಯಕ್ತಿ ಎಲ್ಲರ ಕಣ್ಣಿಗೆ ಹೊಳೆದರು! ಹೊಂದಿಯ ಗದ್ದಲಕ್ಕೆ ಮೆಲ್ಲನೆ ಕಣ್ತೆರೆದರು!! ದೇಸಾಯಿಯು ಅವರನ್ನು

ಕಮತಗಿಗೆ ಕರೆತಂದು, ತನ್ನ ಅರಮನೆಯಲ್ಲಿಳಿಸಿದನು. ಆ ಅರಮನೆಯೇ **'ಅರಮಠ'**ವಾಯಿತು. ಅವರು **'ಹೊಳೆ'**ಯಲ್ಲಿ ಲೀಲೆ ತೋರಿದರಲ್ಲವೆ? ಜನ ಅವರನ್ನು **'ಹುಚ್ಚ'**ರೆಂದು ಕರೆದರಲ್ಲವೆ? ಇದರಿಂದಾಗಿ, ನಿರ್ವಾಣಿ ದೇವರು **'ಹೊಳೆ ಹುಚ್ಚೇಶ್ವರ'**ರಾದರು. ಅವರ ಸಮಾಧಿ ಸ್ಥಾನದ ಸ್ಮಾರಕವಾಗಿ **'ಹೊಳೆಗದ್ದುಗೆ'**ಯಿದೆ; ಅದೀಗ ಹೊಳೆಯ ನಡುವೆ ಆಗಿದೆ. ಈಗಲೂ ಆ ಗದ್ದುಗೆಗೆ ಭಕ್ತರು ನಡೆದುಕೊಳ್ಳುತ್ತಾರೆ.

ಶಿವನಪ್ಪನ ಇಚ್ಛೆಯಂತೆ ಹೊಳೆಹುಚ್ಚೇಶ್ವರರು ಕೋಟೆಕಲ್ಲಿನ ಅವನ ತೋಟದಲ್ಲಿ ಉಳಿದು, ಕ್ಷತ್ರಿಯನಾದ ಅವನಿಗೂ ಮತ್ತು ಅವನ ಮನೆತನ ದವರಿಗೂ ಶಿವದೀಕ್ಷೆಮಾಡಿದರು. ದೇಸಾಯಿಯು ಗುರುಗಳಿಗೆ ನಿರಂತರ ವಾಗಿ, "ಮಾರ್ಗದ ಹಾಸಲು, ಎತ್ತಿಗೆ ರೂಪಿ, ಮೂರು ಮಾಲಿನೊಳಗೆ ಪಸಿಕೆ, ಒಕ್ಕಳ ಉಪ್ಪು, ನಾಗಳ ನೆಲ್ಲು" ಇವೆಲ್ಲವು ನಿಡಗುಂದಿ, ಗುಳೇದ ಗುಡ್ಡ, ಪರ್ವತಿ ಮುಂತಾದ ಊರುಗಳಲ್ಲಿ ಸಲ್ಲುವಂತೆ ವ್ಯವಸ್ಥೆ ಮಾಡಿದನು; 'ಯಾವ ಕಾಲಕ್ಕೂ ತನ್ನ ಮನೆತನದವರು ಶಿವಯೋಗಿಗಳವರ ಮಕ್ಕಳಾಗಿ ನಡೆಯಬೇಕು; ತನ್ನ ಬಳ್ಳಿಯು ಹಬ್ಬಿದ ಹಾಗೆ ಅವರ ಬಳ್ಳಿಯೂ ಹಬ್ಬ ಬೇಕು.' ಎಂಬ ಮಾತನ್ನು ನಡೆಯಿಸಿ ಕೊಡಲು ಗುರುಗಳಲ್ಲಿ ಕೇಳಿ ಕೊಂಡನು; ತನ್ನ ತೋಟದ ಭಾಗದಲ್ಲಿಯೇ ಶಿವಯೋಗಿಗಳಿಗೆ ಮಠವನ್ನು ಕಟ್ಟಿಸಿಕೊಟ್ಟನು; ಇಷ್ಟೇ ಅಲ್ಲ, ತನ್ನ ಪಟ್ಟದ ಕುದುರೆಯನ್ನು ಮಠದ ಸುತ್ತಲೂ ತಿರುಗಹಚ್ಚಿ, ಅದು ಎಲ್ಲೆಲ್ಲಿ ಸುತ್ತಾಡಿ ಬಂದಿತೋ ಅಷ್ಟೆಲ್ಲ ಭೂಮಿ ಯನ್ನು ಶಿವಯೋಗಿಗಳವರ ಪಾದಕ್ಕೆ ಸಮರ್ಪಿಸಿದನು. ಬಳಿಕ ಗುರುಗಳ ಪಟ್ಟಾಭಿಷೇಕವಾಯಿತು. ಕೋಟೆಕಲ್ಲೊಳಗೆ **ಶ್ರೀ ಹೊಳೆಹುಚ್ಚೇಶ್ವರ ನಿರಂಜನ ಪೀಠ**ದ ಸ್ಥಾಪನೆಯಾಯಿತು. ಮಹಾಸ್ವಾಮಿಗಳ ಮಹಿಮೆ ಯಿಂದ, ಮಸೀದೆಯು ಮಠವಾಗಿ, **ಗಿರಿಮಠ** ವೆಂದು ಕಮತಗಿ ಗುಡ್ಡ ದಲ್ಲಿ ಕಂಗೊಳಿಸುತ್ತಿದೆ; ಗೂಳಿಯು ಮೆತ್ತಗಾಗಿ 'ಭಿಕ್ಷಾಕಾಯಕ' ಮಾಡಿ ಪ್ರಾಣ ಬಿಟ್ಟದ್ದರ ನೆನಪಿಗಾಗಿ ಕಟ್ಟಿಸಿದ **'ಗೂಳಿ ಗದ್ದುಗೆ'**ಯು ಕೋಟೆ ಕಲ್ಲ ಮಠದಲ್ಲಿ ಕರ್ತೃಗದ್ದಿಗೆಯ ಮುಂದೆ ಇಂದಿಗೂ ಮೆರೆಯುತ್ತಿದೆ. ಸ್ವಾಮಿಗಳು'ಮದುವೆಯಿಂದ ಮಠದ ಬಳ್ಳಿ,' ಎಂದು ತಮ್ಮ ಶಿಷ್ಯ ಲಿಂಗಯ್ಯ

ನಿಗೆ ಲಗ್ನ ಮಾಡಿದರು; ಅವನ ನಡು ಮಗ 'ನಿರ್ವಾಣ ಮರಿದೇವ'ನಿಗೆ ತಮ್ಮ ಉತ್ತರಾಧಿಕಾರವನ್ನು ದಯಪಾಲಿಸಿದರು. "ಶಿವಣ್ಣಾ, ನಿನ್ನ ದೇಸಾಯಿ ಮನೆತನಕ್ಕೆ ನಿನ್ನ ವಂಶದವರ ಹೊರತು ಮತ್ತಾರೂ ಒಡೆಯ ರಾಗುವದಿಲ್ಲ; **ನಾವು ಪುನಃ ಹತ್ತನೆಯ ಪಟ್ಟಕ್ಕೆ ದರ್ಶನ ಕೊಡು ವೆವು;** ಲಿಂಗಯ್ಯನ ವಂಶಜರೇ ಈ ಪೀಠಕ್ಕೆ ಉತ್ತರಾಧಿಕಾರಿಗಳಾಗುತ್ತ ಹೋಗುವರು." ಎಂದು ಅಪ್ಪಣೆ ಪಡಿಸಿ, ತಾವು ಸೂಚಿಸಿದ ವೇಳೆಗೆ ಸರಿ ಯಾಗಿ ಲಿಂಗವಲ್ಲಿ ಬೆರೆದರು.

೩೭೮ ವರ್ಷದ ಹಿಂದಿನ ಶ್ರೀ ಕೋಟಿಕಲ್ಲ (ಕಮತಗಿ) ಹೊಳೆ ಹುಚ್ಚೇಶ್ವರ ವಿರಕ್ತ ಪೀಠದ **ವಂಶಾವಳಿಯು** ಇಂದಿನತನಕ ಕೆಳಗಿನಂತಿದೆ:–

**ನಿರಂಜನ ವಂಶಾವಳಿ**

| | | | | |
|---|---|---|---|---|
| ೧ | ಶ್ರೀ | ಹೊಳೆಹುಚ್ಚೇಶ್ವರ .... | ಕರ್ತೃಗದ್ದಿಗೆ— | ಕೋಟಿಕಲ್ಲಲ್ಲಿ |
| ೨ | ,, | ನಿರ್ವಾಣಸ್ವಾಮಿ .... | ಗದ್ದಿಗೆ | ,, |
| ೩ | ,, | ಶರಣಾರ್ಯಸ್ವಾಮಿ .... | ,, | ,, |
| ೪ | ,, | ಹುಚ್ಚಪ್ಪಯ್ಯಸ್ವಾಮಿ .... | ,, | ,, |
| ೫ | ,, | ಮುರುಘೇಂದ್ರಸ್ವಾಮಿ .... | ,, | ,, |
| ೬ | ,, | ಲಿಂಗಾರ್ಯಸ್ವಾಮಿ .... | ,, | ,, |
| ೭ | ,, | ಚನ್ನವೀರಸ್ವಾಮಿ .... | ,, | ಕಮತಗಿಯಲ್ಲಿ |
| ೮ | ,, | ಹುಚ್ಚೇಂದ್ರಸ್ವಾಮಿ .... | ,, | ,, |
| ೯ | ,, | ಮುರುಘಾರ್ಯಸ್ವಾಮಿ .... | ,, | ,, |
| ೧೦ | ,, | ಹುಚ್ಚೇಶ್ವರ(ಕಾಶೀಸ್ವಾಮಿ).... | ,, | ಕೋಟಿಕಲ್ಲಲ್ಲಿ |
| ೧೧ | ,, | ಮುಪ್ಪಯ್ಯಸ್ವಾಮಿ .... | ,, | ಕಮತಗಿಯಲ್ಲಿ |
| ೧೨ | ,, | ಹುಚ್ಚಪ್ಪಯ್ಯಸ್ವಾಮಿ .... | | |

ಶಕ ೧೮೭೮ ದುರ್ಮುಖಿನಾಮ ಸಂವತ್ಸರ ಮಾಘ ಶು. ೧೪ ಬುಧ ವಾರ ದಿ. ೧೩–೨–೫೭ ರಂದು, ಮಹಾ ತಪೋನಿಷ್ಠರಾದ ಶ್ರೀ ಪ್ರ. ಸ್ವ. **ಅರಭಾವಿ ದುರದುಂಡೇಶ್ವರ ಮಠದ ಮಹಾಂತೇಶ ಮಹಾಸ್ವಾಮಿ**

ಗಳವರ ವರದ ಹಸ್ತದಿಂದ, **ಶ್ರೀ ಅಯ್ಯಪ್ಪಯ್ಯ ಮರಿದೇವರ** ಅನುಗ್ರಹ ಸ್ಥಲ ನಿರಂಜನ **ಪಟ್ಟಾಭಿಷೇಕವು**, ಪರಮಪೂಜ್ಯ ದಾಸೋಹ ಮೂರ್ತಿಗಳಾದ ಶ್ರೀ ಮ. ಪ್ರ. ಸ್ವ. ಕೊಪ್ಪಳ ಗವಿಮಠದ **ಗವಿಸಿದ್ಧೇಶ್ವರ ಮಹಾಸ್ವಾಮಿ**ಗಳವರ ನೇತೃತ್ವದಲ್ಲಿ, ಶ್ರೀ ಮ. ಪ್ರ. ಸ್ವ. ಗಳಾದ ಜಮಖಂಡಿ ಹಾಗೂ **ಗಂಗಾವತಿ ಮಹಾಸ್ವಾಮಿ**ಗಳವರ ಅಧಿಪತ್ಯದ ಕೆಳಗೆ ವಿಜೃಂಭಣೆಯಿಂದ ನೆರವೇರಿತು.



## ೨ ಹುಚ್ಚನಿವನಲ್ಲ, ಲೀಲಾಮಲ್ಲ!

"ನಾವು ಪುನಃ ಹತ್ತನೆಯ ಪಟ್ಟಕ್ಕೆ ದರ್ಶನಕೊಡುವೆವು." ಎಂಬುದಾಗಿ ಕರ್ತೃ ಸ್ವಾಮಿಗಳ ಅಪ್ಪಣೆಯಾದುದರಿಂದಲೂ; ೨ ನೆಯ ಸ್ವಾಮಿಗಳಿಂದ ೯ ನೆಯ ಸ್ವಾಮಿಗಳವರಿಗೆ ಆಗಿಹೋದವರೆಲ್ಲರಿಗಿಂತ ೧೦ ನೆಯ ಸ್ವಾಮಿಗಳು ದೇಹಸಂಪತ್ತಿ, ವಿದ್ವತ್ತು, ಮತ್ತು ವೈರಾಗ್ಯಗಳಲ್ಲಿ ಹೆಚ್ಚಾಗಿ ಹೆಸರುವಾಸಿಯಾದುದರಿಂದಲೂ; ಹಾಗೂ ೧೦ ನೆಯ ಸ್ವಾಮಿಗಳ ಮೂಲಕವಾಗಿಯೇ ಕೋಟಿಕಲ್ಲ (ಕಮತಗಿ) ಪೀಠದ ಬೆಳಕು ಎಲ್ಲೆಲ್ಲಿಯೂ ಬಿದ್ದುದರಿಂದಲೂ, ನಾವು ೧೦ ನೆಯರಾದ **ಶ್ರೀ ಹುಚ್ಚೇಶ್ವರ** (ನಾಶೀಸ್ವಾಮಿ) **ಮ ಹಾ ಸ್ವಾ ಮಿ ಗ ಳ ವ ರ** ಜೀವನ ಚರಿತ್ರವನ್ನು ಸಂಕ್ಷೇಪವಾಗಿ ನಿರೂಪಿಸುತ್ತೇವೆ: —

೯ ನೆಯವರಾದ ಮುರುಘಾರ್ಯ ಸ್ವಾಮಿಗಳವರ ಅಣ್ಣ **ಮುಪ್ಪಯ್ಯ**ನು ಗ್ರಾಮದ ಮಹಾವತ್ತಾ 'ಜಮೀನು' ಗಳ ಸಾಗುವಳಿಯ ವ್ಯವಸ್ಥೆಯನ್ನು ನೋಡುತ್ತಿದ್ದನು. ದುಡಿಯುವದೇ ಅವನ ಜೀವನಮಂತ್ರ; ತನ್ನ ದುಡಿಮೆಯ ಸ್ವಹಸ್ತಾಂತದಿಂದ ಇನ್ನೊಬ್ಬರನ್ನು ದುಡಿಯ ಹಚ್ಚುವದೇ ಅವನ ತಂತ್ರ; ನೇಗಿಲವೇ ಅವನ ಯಂತ್ರ. ದೈವಾನುಕೂಲದಿಂದ ಅವನಿಗೆ **ಪತಿ**ವ್ರತೆಯಾದ ಪತ್ನಿಯೇ ದೊರೆತಿದ್ದಳು. ಅವಳೇ **ವೀರಮ್ಮ**. ಶಕ ೧೮೦೩ (ಇಸ್ವಿ ೧೮೮೧) ವೃಷಭನಾಮ ಸಂವತ್ಸರದಲ್ಲಿ ಕಮತಗಿಯೊಳಗೆ **ಶಿವಶರಣೆ**

ವೀರಮ್ಮನು ಮೂರನೆಯದಾಗಿ ಗಂಡು ಮಗುವನ್ನು ಹೆತ್ತಳು. ಅವನ ಹೆಸರು 'ಹುಚ್ಚಯ್ಯ.' ಅವನು ಬಿದಿಗೆಯ ಚಂದ್ರನಂತೆ ಬೆಳೆದನೆಂದು ಬೇರೆ ಹೇಳಬೇಕೆ?

ಉಡಾಳತನವೂ ಒಮ್ಮೊಮ್ಮೆ ಉಜ್ವಲ ಭವಿಷ್ಯದ ಮುಂಗುರುಳಾಗುವದೋ ಏನೋ! ಸ್ವಾಮಿ ಮುರುಘಾರ್ಯರು ಹುಚ್ಚಯ್ಯನಿಗೆ ಅವನಿಬ್ಬರು ಅಣ್ಣಂದಿರ ಜೊತೆಗೆ ದೀಕ್ಷೆ ಕೊಡಿಸಿ, ಅವನನ್ನು ತಮ್ಮ ಸೇವೆಗೆ ಇಟ್ಟುಕೊಂಡರು. ಮನಸ್ಸು ಬಂದರೆ, ಹುಚ್ಚಯ್ಯನು ಗುರುಸೇವೆ ಮಾಡುವನು; ಇಲ್ಲವಾದರೆ, ಹರಿವಂಗಿ ಹಾಕಿಕೊಂಡು ಕಮತಗಿಯಲ್ಲಿ ಗಣ ಗಣ ತಿರುಗಾಡಿ ಬರುವನು; ಬರಿ ಮೈಯಿಂದ ಚಳಿ–ಮಳಿ–ಗಾಳಿ–ಬಿಸಿಲೆನ್ನದೆ ಮನಬಂದತ್ತ ಓಡಾಡುವನು; ಇಡಿದಿನ ಉಪವಾಸವಿದ್ದರೆ, ಇನ್ನೊಂದುಬಾರಿ ರಾತ್ರಿಯತನಕ ಮೃಷ್ಟಾನ್ನವನ್ನು ಮೇಲಿಂದ ಮೇಲೆ ಉಣ್ಣುವನು; ತುಟಿಯೆರಡು ಮಾಡದೆ ಗಪ್ಪಗಡದು ಇರುವನು; ಮತ್ತೊಂದುಬಾರಿ, ಹಸು ಕೊಟ್ಟರೂ ಮಾತಾಡುವದನ್ನು ಬಿಡಲಿಕ್ಕಿಲ್ಲವೆನ್ನುವವನಂತೆ ಮಾತಾಡಿಯೇ ಮಾತಾಡುವನು. ಗಿಡ–ಗುಡ್ಡ ಏರುವದು, ಭಾವಿ-ಕೆರೆ ಹಾರುವದು, ತುಂಬಿದ ಹೊಳೆ ಬೀಳುವದು, ಆಟ–ನೋಟಗಳಲ್ಲಿ ಹೊತ್ತುಗಳೆಯುವದು, ತೇರು, ಮದುವೆ ಮನೆಗಳಲ್ಲಿ ಅಡಗಿಕೊಳ್ಳುವದು, ಕಾಲುಕೆದರಿ ಜಗಳ ತೆಗೆಯುವದು, ಇವೇ ಅವನ ಹಗಲಿರುಳಿನ ಕೆಲಸಗಳು. ಮೊದಮೊದಲು ಅವನಿಗೆ ಸ್ವಾಮಿಗಳು ಆ ಊರಿನ ಕನ್ನಡ ಶಾಲೆಯ ಮುಖ್ಯಾಧ್ಯಾಪಕ ಕೈ. ವಾ. ಲಕ್ಕೀಮರದ ಚನ್ನಪ್ಪನಿಂದ ಕನ್ನಡ ಹೇಳಿಸಿಯೂ ನೋಡಿದರು; ಅದೆಲ್ಲಾ ಬೋರುಗಲ್ಲಮೇಲೆ ಮಳೆಗರೆದಂತಾಯಿತು. ಮರಿ- ಹುಚ್ಚಯ್ಯನು ಬಾಲ್ಯದಲ್ಲಿ ಅಕ್ಷರ ಶತ್ರುವೂ, ಉಡಾಳನೂ, ಹಾಗೂ ವಿಲಕ್ಷಣ ಮೂರ್ತಿಯೂ ಆದುದರಿಂದ, ಸ್ವಾಮಿಗಳಿಗೆ ಚಿಂತೆ ಹತ್ತಿತು; ಹುಚ್ಚಯ್ಯನು ಎಲ್ಲಿ ಹುಚ್ಚನಾಗುವನೋ ಎಂಬ ಹುಚ್ಚೇ ಹಿಡಿದಂತಾಯಿತು. ಹುಚ್ಚಯ್ಯನಿಗೆ ಹುಚ್ಚನೆನ್ನಲಿಕ್ಕೂ ಬರುವದಿಲ್ಲ. ಯಾಕಂದರೆ ಅವನ ಕೆಳಗಿನ **ಬಾಲಲೀಲೆ**ಗಳಲ್ಲಿ ಅವನ ದೈವಿಕ ಶಕ್ತಿಯು ಎದ್ದುನಿಂತಿದೆ.:—

೧) ಹುಚ್ಚಯ್ಯನು ಒಮ್ಮೆ ಪತ್ರಿ ತರಲಿಕ್ಕೆ ಹೋದಾಗ, ಹೊಳೆ

ಯಲ್ಲಿ ಬಿಡಿ, ಹಾಗೆಯೇ ಬಂಗ್ಲೆಯಿಂದ ಮಠಕ್ಕೆ ಮರಳಿದನು. ಗುರುಗಳು ಸಿಟ್ಟಿಗೆದ್ದು ಬೆತ್ತದಿಂದ ಥಳಿಸಿದರು. ಕೂಡಲೆ, ಅವನು ಹಿತ್ತಲ ಬಾವಿಯಲ್ಲಿ ಧಡಮ್ಮನೆ ಹಾರಿಬಿಟ್ಟನು. ಗುರುಗಳು ಗಾಬರಿಯಾಗಿ ಬಾವಿಯಲ್ಲಿ ಹುಡುಕಿಸಿದರು. ಅಲ್ಲಿ ಹುಚ್ಚಯ್ಯನ ಸುಳಿವೇ ಇದ್ದಿಲ್ಲ. 'ಹುಚ್ಚಯ್ಯನು ಓಣಿಯಲ್ಲಿ ಆಡುತ್ತಿರುವನು' ಎಂದು ಒಬ್ಬನು ಓಡಿಬಂದು ಹೇಳಿದಾಗಲೆ, ಗುರುಗಳಿಗೆ ಹೋದ ಜೀವ ಬಂದಹಾಗಾಯಿತು.

೨) ಹುಚ್ಚಯ್ಯನು ಹೆಣ್ಣು ಹುಟ್ಟಿದ ಮನೆ ಹೊಕ್ಕು, ಅಲ್ಲಿನ ತೊಟ್ಟಿಲನ್ನು ತೂಗಿ ಹಾಡಿದರೆ, ಮುಂದೆ ಗಂಡುಮಗು ಹುಟ್ಟುತ್ತಿತ್ತು. ಒಂದುವೇಳೆ, ತೊಟ್ಟಿಲಲ್ಲಿನ ಯಾವದೇ ಕೂಸನ್ನು ಅವನು ತೆಗೆದು ನೆಲಕ್ಕಿಟ್ಟರೆ, ಆ ಮಗು ಸಣ್ಣಾಗಿ ಅಲ್ಪಕಾಲದಲ್ಲೇ ಸಾಯುತ್ತಿತ್ತು.

೩) ಒಂದುವರ್ಷ, ಮಳೆಯಾಗದೆ ಬೆಳೆಯೊಣಗಿದಾಗ, ಹುಚ್ಚಯ್ಯನು ಊರಲ್ಲಿ ಬೆಳದಿಂಗಳೊಳಗೆ ಕೊಡೆ ಹಿಡಿಸಿಕೊಂಡು ತಿರುಗಾಡಿದನು. ಆಗಲೆ ಮಳೆಯಾಯಿತು; ಬೆಳೆ ಬಂದವು.

೪) ಒಂದುದಿನ, ಹುಚ್ಚಯ್ಯನು ಓರಿಗೆಯವರೊಡನೆ ಬೇಟೆಗಾಗಿ ಹೋಗಿದ್ದನು. ಹುಡುಗ ಹುಡುಗರಲ್ಲಿ ಜಗಳಕ್ಕಾರಂಭವಾಯಿತು. ಆಗ ಹುಚ್ಚಯ್ಯನು, "ನೀವೀಗ ಜಗಳಾಡಿದಂತೆ, ಇನ್ನು ಮೂರು ತಿಂಗಳಿಗೆ ಊರಲ್ಲೂ ಜಗಳ ನಡೆಯುವದು;" ಎಂದು ಸೂಚಿಸಿದಂತೆಯೇ, ಊರಲ್ಲಿ ಇಬ್ಬಣವಾಗಿ ಭಾರೀ ಜಗಳ ನಡೆದು, 'ಮಾರಾ ಮಾರಿ' ಯಲ್ಲಿ ಮುಗಿಯಿತು.



## ೩ ಪಂಥವಗೈದ, ಪಂಡಿತನಾದ!

ತುಂಟರ ಮನಸ್ಸು ಒಮ್ಮೆ ತಿರುಗಬಾರದೆ ತಿರುಗಿದರೆ, ಅವರಿಗೂ ಮುಂದೆ ಒಳ್ಳೆಯ ದಾರಿಯು ಸಿಕ್ಕೇ ಸಿಗುವದು. ಒಂದುದಿನ ಇಳಿಹೊತ್ತಿಗೆ ಸ್ವಾಮಿಗಳು ಕಮತಗಿ ಮಠದಲ್ಲಿ ಎದುರಿನ ಮೇಲಿನ ಪಡಸಾಲೆಯಲ್ಲಿ ಕೂತಿದ್ದರು. ಅವರ ಮುಂದೆ ಮಗ್ಗಲಿಗೆ ಹುಚ್ಚಯ್ಯನು ನಿಂತಿದ್ದನು. ಅಲ್ಲಿಗೆ ಅಕಸ್ಮಾತ್ತಾಗಿ ಬಂದಿದ್ದ ಹುಚ್ಚಯ್ಯನ ಚಿಗಪ್ಪನ ಮಗ ಮುರಿಗೆಯ್ಯನು ಸ್ವಾಮಿಗಳ ಆದೇಶದಂತೆ, ದಕ್ಷಿಣಾದಿಯಲ್ಲಿ ಒಂದೆರಡು ತತ್ತ್ವದ ಹಾಡುಗಳನ್ನೂ, ಮತ್ತು ಒಂದು ಮಂಗಳಾರತಿ ಪದವನ್ನೂ, ಶುದ್ಧವಾಗಿಯೂ, ಮಧುರವಾಗಿಯೂ, ಅರ್ಥ ಹೊರ ಹೊಮ್ಮುವಂತೆ ಹಾಡಿ ತೋರಿಸಿದನು. ಸ್ವಾಮಿಗಳು ಸಂತುಷ್ಟರಾಗಿ ಮುರಿಗೆಯ್ಯನನ್ನು ಮುಂದೆ ಕರೆದು ಬೆನ್ನು ಚಪ್ಪರಿಸಿ, 'ಇದ್ದರೆ ನಿನ್ನಂತಹ ಹುಡುಗನಿರಬೇಕು!' ಎಂದು ಮೊದಲಾಗಿ ಹೊಗಳಿ, ಅವನಿಗೆ ೨ ರೂ. ಬಹುಮಾನವಿತ್ತು ಪ್ರೋತ್ಸಾಹಿಸಿದರು. ಅದೇ ಕ್ಷಣ, ಹುಚ್ಚಯ್ಯನನ್ನು ಕುರಿತು, "ಶತದಡ್ಡಾ, ಮುದುಕನಾಗುತ್ತ ಬಂದಿ. ವಿದ್ಯ ಇಲ್ಲದವನು ಹದ್ದಿಗಿಂತ ಕಡೆ! ನಿನ್ನ ದುರ್ಮುಖವನ್ನು ತೋರಿಸಲಿಕ್ಕೆ ನಿನಗೆ ದುಃಖವೆನಿಸುವದಿಲ್ಲವೆ? ಗಾದೆಯ ಮೇಲೆ ಕೂಡ್ರುವವನು ನೀನು!" ಎಂದು ಮುಂತಾಗಿ ನಾಲ್ಕು ಜನರಮುಂದೆ ಛೀ ಥೂ ಹಾಕಿದರು. ಪೂರ್ವ ಜನ್ಮದ ಸಂಸ್ಕಾರವಾಗಿ, ಹುಚ್ಚಯ್ಯನಲ್ಲಿ ಹುದುಗಿದ ದೈವೀ ಶಕ್ತಿಯ ಬಗೆಗೆ ಸ್ವಾಮಿಗಳಲ್ಲಿ ಸಾಕಷ್ಟು ಅಭಿಮಾನವಿದ್ದರೂ, ಆ ಶಕ್ತಿಯ ವಿಕಾಸಕ್ಕೆ ವಿದ್ಯೆಯು ಅತ್ಯಾವಶ್ಯಕವೆಂದು, ಅವರು ಸಂದರ್ಭೋಚಿತವಾಗಿ ಮಾತನಾಡಿದರಷ್ಟೆ? ಇತ್ತ ಹುಚ್ಚಯ್ಯನು ತನ್ನ ದಡ್ಡತನಕ್ಕೆ ತೀರಾ ನಾಚಿಕೆ ಪಟ್ಟನು ಅದೇ ದಿನ ಮುಚ್ಚಂಜೆಯಾಗಿರಬೇಕು. ೭ ನೆಯವರಾದ ಚನ್ನವೀರ ಸ್ವಾಮಿಗಳ ಗದ್ದುಗೆಯ ಮುಂದೆ ನಿಂತು ಅನನ್ಯ ಭಾವದಿಂದ, "ಸ್ವಾಮಿ, ನಿನ್ನ ಪಾದ ಸಾಕ್ಷಿಯಾಗಿ ಪಂಥ ಮಾಡುತ್ತೇನೆ. ವಿದ್ಯಾವಂತನಾಗಿಯೇ

**ತಿರುಗಿ ಈ ಮಠದಲ್ಲಿ ಕಾಲಿಡುವೆ,** ನಿನ್ನ ದಯವಿರಲಿ; "ಎಂದವನೇ ಹುಚ್ಚಯ್ಯನು ಯಾರಿಗೂ ಹೇಳದೆ ಕೇಳದೆ ಹಿತ್ತಲಬಾಗಿಲಿಂದ ಹೊರ ಬಿದ್ದನು.

ಕತ್ತಲಲ್ಲಿ ಕಾಲ್ನಡಿಗೆಯಿಂದ ಗುಳೇದಗುಡ್ಡಕ್ಕೆ ಬಂದು, ಹುಚ್ಚಯ್ಯನು ತಮ್ಮ ಮಠದ ಭಕ್ತ ಕೈ. ವಾ. ಹೆಗಡಿ ಮಲ್ಲಪ್ಪನ ನೆರವಿನಿಂದ ಹೊಸ ಪೇಟೆಯಲ್ಲಿನ ಮುರುಘೇಂದ್ರ ಸ್ವಾಮಿಗಳ ಮಠಕ್ಕೆ ಹೋಗಿ, ಆ ಪೇಟೆಯ ಸ್ವಪದವರ ಮುಂದೆ ವಿದ್ಯೆ ಕಲಿಯುವ ತನ್ನ ಹಂಬಲವನ್ನಿಟ್ಟು, ಅಂಕಲಕೋಟಿ ಶರಣರ ಪಾಠಶಾಲೆಯಲ್ಲಿ ತನಗೆ ಪ್ರವೇಶ ದೊರೆಯಬೇಕಾಗಿ ಕೇಳಿಕೊಂಡನು. 'ಇ೮ ವರ್ಷದ ಈತನು ಇನ್ನೇನು ವಿದ್ಯ ಕಲಿಯುವನು? ಈತನಿಗೇನು ವಿದ್ಯೆ ಹತ್ತುವದು?' ಎಂದು ನಕ್ಕು ಮಾತನಾಡಿದ ಶಾಸ್ತ್ರಿಗಳಿಗೆ, "ಇರಲಿ, ಈತನಿಗೊಂದು ಸಂಧಿಯೊದಗಿಸಿ ಕೊಡಿರಿ. ನೋಡೋಣ." ಎಂದು ದೈವದವರು ಶಾಸ್ತ್ರಿಗಳಿಗೆ ಸಮಾಧಾನಹೇಳಿ, ಹುಚ್ಚಯ್ಯನನ್ನು ಪಾಠಶಾಲೆಯಲ್ಲಿಟ್ಟರು. ಅಂಕಲಿಪಿಯಿಂದ ಅವನ ವಿದ್ಯಾರಂಭವಾಯಿತು. ಮೊದಲನೆಯ ದಿನ ಸಣ್ಣ ದೊಡ್ಡ ಪಾಠಕರು ಅವನನ್ನು ಕಂಡು ಅಣಕವಾಡಿದರು. ಹುಚ್ಚಯ್ಯನು ಮಾತ್ರ ಇದಾವುದನ್ನೂ ಲೆಕ್ಕಿಸದೆ, ತಾಳ್ಮೆ-ಚಿಗುಟುತನಗಳಿಂದ ಮುಂಚೆ ಕನ್ನಡವನ್ನು ಓದಿದನು; ಜೊತೆಗೆ, ಸಂಸ್ಕೃತ ಪ್ರಥಮ ಪುಸ್ತಕವನ್ನೂ ಮುಗಿಸಿದನು. ಅವನ ವಿದ್ಯೆಯ ಲಕ್ಷಣವನ್ನು ತಿಳಿದು, ಶಾಸ್ತ್ರಿಗಳಿಗೂ ಆನಂದವಾಗದಿರಲಿಲ್ಲ. ಆದರೆ, ಅವನು ಅಲ್ಲಿ ಒಂದು ವರ್ಷ ಓದಿರಬೇಕು. ಪಾಠಶಾಲೆಯು ನಿಂತುಹೋಯಿತು.

...

ಹುಚ್ಚಯ್ಯನಲ್ಲಾದರೋ ದಿನದಿನಕ್ಕೆ ವಿದ್ಯೆಯ ಲವಲವಿಕೆಯು ಬೆಳೆಯುತ್ತ ನಡೆಯಿತು. ಗುಳೇದಗುಡ್ಡದಿಂದ ನೆಟ್ಟಗೆ ನಾಯಕಲ್ಲಿಗೆ ನಡೆದೇ ಹೋಗಿ, ಅಲ್ಲಿನ ಪಾಠಶಾಲಾಧ್ಯಾಪಕರಾದ ಶಾಸ್ತ್ರಿಗಳನ್ನು ತಾನೇ ಸ್ವತಃ ಕಂಡು ವಿಚಾರಿಸಿದನು. "ವಾರದ ಮನೆ ಸಿಗುವದಿಲ್ಲ. ಕಂತೇಭಿಕ್ಷೆ ನೆತ್ತಿ ಕಲಿಯುವಂತಿದ್ದರೆ ಇರಬಹುದು." ಎಂಬ ಶಾಸ್ತ್ರಿಗಳ ಸಲಹೆಯನ್ನು ಹುಚ್ಚಯ್ಯನು ಮನ್ನಿಸಿದನು. ಇಷ್ಟು ದೊಡ್ಡವನಾದರೂ, ದೊಡ್ಡಮಠದ ಮರಿದೇವನಾದರೂ, ಊರಲ್ಲಿ ಕಚ್ಚಾಯವೆತ್ತಿಕೊಂಡು ಬರಲು ಒಪ್ಪಿದುದನ್ನು

ನೋಡಿ ಶಾಸ್ತ್ರಿಗಳಿಗೆ ಆಶ್ಚರ್ಯವಾಯಿತು. ಪಾಠಕ್ಕೆ ಅನುಕೂಲ ಮಾಡಿ ಕೊಟ್ಟರು. ಹುಚ್ಚಯ್ಯನು ಕೊಟ್ಟ ಪಾಠವನ್ನು ಚಿತ್ತಗೊಟ್ಟು ಬೇಗ ಬೇಗನೆ ಕಲಿತು ಒಪ್ಪಿಸುವನು; ಜಾಣನೆನಿಸಿಕೊಳ್ಳುವನು. ೨-೩ ತಿಂಗಳು ಕಳೆದ ಮೇಲೆ, ಅವನ ಸಹಪಾಠಿಯೊಬ್ಬನು ಶಾಲೆ ಬಿಟ್ಟು ಹೋದದ್ದರಿಂದ, ಆ ವಿದ್ಯಾರ್ಥಿಯ ವಾರದ ಮನೆಯು ಹುಚ್ಚಯ್ಯನಿಗೆ ದೊರೆಯಿತು. ತಾಸ ರಡು ತಾಸು ಪೂಜೆ-ನಮಸ್ಕಾರದಲ್ಲೇ ಹೋಗಹತ್ತಿದರಿಂದ, ಅಭ್ಯಾಸದ ಕಡೆಗೇನೇ ವಿಶೇಷ ಲಕ್ಷ್ಯ ಹಾಕಿದ ಹುಚ್ಚಯ್ಯನು ತನಗೆ ಅಯ್ಯಾಚಾರ ವಾಗಿಲ್ಲವೆಂಬ ಕುಂಟು ನೆವ ಮುಂದುಮಾಡಿ, ಆ ವಾರದ ಮನೆಯಿಂದ ಹಾಗೆಯೆ ನುಸುಗಿಕೊಂಡನು. ಮತ್ತೆ ಕಂತೇಭಿಕ್ಷೆ. ಅಲ್ಲಿ ಅಜಮಾಸು ಮೂರುವರ್ಷವಿದ್ದು, ಓದನ್ನು ತೀರಿಸಿಕೊಂಡು, ಹೆಚ್ಚಿನ ಓದಿಗಾಗಿ ಶಾಸ್ತ್ರಿ ಗಳ ಅನುಮತಿಯಂತೆ ಗದಗಿನ **ಜಗದ್ಗುರು ತೋಂಟದಾರ್ಯರ ಸಂಸ್ಕೃತ ಪಾಠಶಾಲೆಗೆ** ಹೊರಟು ಬಂದನು.

ಆ ಮಹಾ ಪಾಠಶಾಲೆಯಲ್ಲಿ ಹುಚ್ಚಯ್ಯನ ಪಾಠಕ್ಕಾರಂಭವಾಯಿತು. ಶಾಸ್ತ್ರಿಗಳು ಅವನ ವಿದ್ಯಾಪ್ರೌಢಿಮೆ-ಗ್ರಹಣ ಶಕ್ತಿಗಳಿಗೆ ಬೆರಳು ಕಚ್ಚಿದರು. ಅವನ ಮುಖದಮೇಲೆ ಒಡೆದು ಕಾಣುತ್ತಿದ್ದ ಪಾಂಡಿತ್ಯ-ವಿರಕ್ತಿಗಳ ಚಿಹ್ನ ವನ್ನು ಕಂಡುಹಿಡಿದು, "ಹುಚ್ಚೇಶಾ, ನಮ್ಮ ಭಾಗ್ಯಕ್ಕೆ ನೀನು ನಮ್ಮ ಪಾಠ ಶಾಲೆಗೆ ಬಂದಿರುವಿ. ನೀನು ನಮ್ಮ ಸಮಾಜದಲ್ಲಿ ಪಂಡಿತ ರತ್ನವಾಗಿ ಬೆಳ ಗುವಿ!" ಎಂಬುದಾಗಿ ಶಾಸ್ತ್ರಿಗಳು ಮಾಸಿಕ ಪರೀಕ್ಷೆ ತೆಗೆದುಕೊಳ್ಳುವ ಕಾಲಕ್ಕೆ ಒಡನುಡಿದರು. ಅಷ್ಟರೊಳಗೆ, ಜಗದ್ಗುರುಗಳು ಆಗಮಿಸಿ, ಹುಚ್ಚಯ್ಯ ನ ಕಡೆಗೆ ಬೆರಳು ಮಾಡಿ, "ಶಾಸ್ತ್ರಿಗಳೆ, ಈತನಾರು? ಸತ್ಯವನ್ನು ಹೇಳಿರಿ!" ಎಂದು ಸಾಶಂಕರಾಗಿ ಕೇಳಿದರು. ಶಾಸ್ತ್ರಿಗಳಿಗೆ ನಿಜಕ್ಕೂ ದಿಗಿಲು ಬಡಿಯಿತು; ಯಾಕಂದರೆ, ಹುಚ್ಚಯ್ಯನು ಮುರುಘಾ ಸಮಯದವನೆಂದು ಅವರಿಗೆ ಗೊತ್ತಿತ್ತು. ಜಗದ್ಗುರುಗಳಿಗೆ ಶಾಸ್ತ್ರಿಗಳು ಅವನ ಮಠದ ನಿಜಸಂಗತಿ ಯನ್ನು ನಿವೇದಿಸಿದರು. ಜಗದ್ಗುರುಗಳು, "ಎಲೋ ಹುಚ್ಚಾ, ಮುರಘೇ ಸಮಯದವರಿಗೆ ನಮ್ಮಲ್ಲಿ ಸ್ಥಾನವಿಲ್ಲ. ಬೇರೆ ಕಡೆಗೆ ಹೊರಟು ಹೋಗು" ಎಂದು ಆಜ್ಞಾಪಿಸುವದೊಂದೇ ತಡ, ಹುಚ್ಚಯ್ಯನು ತನ್ನ ಗಂಟು-ಗದಡಿ

ಗಳನ್ನೆಲ್ಲ ಸಜ್ಜುಗೊಳಿಸಿಕೊಂಡು, ನೇರವಾಗಿ ಹುಬ್ಬಳ್ಳಿಗೆ ಪ್ರಯಾಣ ಬೆಳೆಸಿದನು.

'ಮನವಿದ್ದಲ್ಲಿ ಮಾರ್ಗವಿದೆ': ಹುಚ್ಚಯ್ಯನು ಹುಬ್ಬಳ್ಳಿಗೆ ಮುಟ್ಟಿದನು; ಮೂರು ಸಾವಿರ ಮಠಕ್ಕೆ ನಡೆದನು. ಲಿಂ. **ಜಗದ್ಗುರು ಗಂಗಾಧರ ಮಹಾಸ್ವಾಮಿ** ಗಳವರನ್ನು ಕಂಡನು. ಗದಗಿನ ತೋಂಟದಾರ್ಯರು ಚೀಲಾಳ ಸಮಯದವರಾದರೆ, ಹುಬ್ಬಳ್ಳಿಯ ಗಂಗಾಧರ ಸ್ವಾಮಿಗಳು ಕುಮಾರ ಸಮಯದವರು. ಅವನ ಮನಸ್ಸು ಕೊಂಚ ಅಳುಕಿದಾದರೂ, ಮರುಕ್ಷಣದಲ್ಲೆ ಸ್ವಾಮಿಗಳಿಗೆ ತನ್ನ ಸಮಯದ ವಿಷಯವಾಗಿ ಸತ್ಯವನ್ನೇ ದೈನ್ಯಭಾವದಿಂದ ಅರಿಕೆ ಮಾಡಿಕೊಂಡನು. ಆದೇಕೋ ಸ್ವಾಮಿಗಳು ಆಕ್ಷೇಪಿಸಲಿಲ್ಲ. ಮೊದಲು ಹುಚ್ಚಯ್ಯನು **ಶ್ರೀಗುರು ಸಿದ್ಧೇಶ್ವರ ದಾಸೋಹ ಮಂದಿರ** ದಲ್ಲಿದ್ದು, ವಿದ್ಯಾಭ್ಯಾಸ ಸಾಗಿಸಿದನು. ಕೆಲವು ದಿನಗಳಾದ ಬಳಿಕ, ಕೈ. ವಾ. **ಕಂಸಳ್ಳಿ ಮಡಿವಾಳಪ್ಪ** ನಿಗೆ ಯೋಗ್ಯ ಮರಿ ಬೇಕಾಗಿದ್ದುದರಿಂದ, ಸ್ವಾಮಿಗಳ ಅಪ್ಪಣೆಪಡೆದು, ಹುಚ್ಚಯ್ಯನು ದಾಸೋಹ ಬಿಟ್ಟು, ಆ ಶೀಲವಂತ ಶೆಟ್ಟಿಯ ಮನೆಯಲ್ಲಿದ್ದು, ಅವನಿಗೆ ಧಾರ್ಮಿಕ ಸಲಹೆಗಾರನಾಗಿ, ಮನೆಯಲ್ಲಿ ಎಲ್ಲರಿಗೂ ಬೆಲ್ಲವಾಗಿ ನಡೆದುಕೊಂಡನು; ವ್ಯಾಕರಣ ತೀರ್ಥ ಕೈ. ವಾ. ಪಂ. **ಬೆನಕನಹಳ್ಳಿ ಗುರುಮೂರ್ತಿ ಶಾಸ್ತ್ರಿ** ಗಳವರಲ್ಲಿ ಸಿದ್ಧಾಂತ ಕೌಮುದೀ, ಬಾಲ ಮನೋರಮಾ ಮುಂತಾದುವನ್ನು ಹೇಳಿಸಿಕೊಂಡು, ವ್ಯಾಕರಣಶಾಸ್ತ್ರವನ್ನು ಚನ್ನಾಗಿ ತಿಳಿದುಕೊಂಡನು. ಎಂದಿನಂತೆ ಅಲ್ಲಿಯೂ ಅವನು ತನ್ನ ಗುರುಭಕ್ತಿ, ಪರಿಶ್ರಮ, ಚಾತುರ್ಯ ಮುಂತಾದ ಗುಣಗಳಿಂದ ನಾನು ಅಲ್ಲಿಗೆ ಹೋದ ತುಸು ದಿನದಲ್ಲಿ ಪ್ರಕಾಶಕ್ಕೆ ಬಂದನು: ಆವಾಗ ಅವನು ಕಿರಿಯ ವಿದ್ಯಾರ್ಥಿಗಳಿಗೆ ಬಿಡುವು ದೊರೆತಾಗ ಪಾಠ ಹೇಳುವ ಪರಿಪಾಠ ಇಟ್ಟುಕೊಂಡನು. ಎಲ್ಲ ವಿದ್ಯಾರ್ಥಿಗಳಿಗೂ ಅಚ್ಚುಮೆಚ್ಚಿನವನಾಗಿದ್ದನು. ಅವನು ಅಲ್ಲಿನ **ಮಹಾಪಾಠಶಾಲೆ**ಯ ವಿವಿಧ ಕಾರ್ಯ ಕಲಾಪಗಳಲ್ಲಿ ಮುಖ್ಯ ಭಾಗವಹಿಸಿ, ಪ್ರತಿಯೊಂದರಲ್ಲಿಯೂ ತನ್ನ ಬುದ್ಧಿ ವೈಭವವನ್ನು ಸೂರೆಗೈದು, ಪಾಠಶಾಲೆಗೇನೆ ಮುಖಂಡನಾದನು; ಅಲ್ಲಿ ಸುಮಾರು ಮೂರುವರ್ಷ ಓದಿ, ಕನ್ನಡ-ಸಂಸ್ಕೃತ

ಗಳೆರಡರಲ್ಲೂ, ಪಾಂಡಿತ್ಯವನ್ನು ಗಳಿಸಿಕೊಂಡನು; ಸಣ್ಣ ಸಣ್ಣ ಕವನಗಳನ್ನೂ, ಬಿಡಿ ಬಿಡಿ ಲೇಖನಗಳನ್ನೂ ಬರೆಯಲುಪಕ್ರಮಿಸಿದನು; ಚರ್ಚಾಕೂಟದಲ್ಲಿಯೂ ಭಾಗತಕ್ಕೊಂಡು, ಮುಂದಾಳು – ಮಾತುಗಾರನೆನಿಸಿಕೊಂಡನು. ಒಟ್ಟಿಗೆ, ಅವನು ಸರ್ವವಿಧದಲ್ಲೂ ಆದರ್ಶವಿದ್ಯಾರ್ಥಿಯಾದನು; ಪಂಥದಂತೆ ಪಂಡಿತನಾದನು.



## ೪ ಕಾಶಿಯವಾಸಿ, ವಿದ್ಯೆಯ ರಾಶಿ.

ಇಷ್ಟುದಿನ ಹುಚ್ಚಯ್ಯನು ಮನೆ-ಮಾರು, ಮಠ-ಮಾನ್ಯಗಳನ್ನು ಮರೆತು, ಕನಸು ಮನಸಿನಲ್ಲೂ ತಮ್ಮೂರನ್ನು ನೆನಿಸದೆ, ಕೇವಲ ವಿದ್ಯಾಭ್ಯಾಸದಲ್ಲಿ ತನ್ಮಯನಾಗಿದ್ದನಷ್ಟೆ? ಇದೀಗ ಅವನಿಗೆ ತಮ್ಮೂರ ನೆನಪಾಗಿ, ತಮ್ಮೂರಿನ ಕೈ. ವಾ. ಕೊಳ್ಳಿ ಶಂಕರಪ್ಪನ ಮುಖಾಂತರ ಪ್ರಮುಖರನ್ನು ಧ್ದೇಶಿಸಿ, ತಾನು ಮಠ ಬಿಟ್ಟಾಗಿನಿಂದ ಅಂದಿನತನಕ ಪಟ್ಟ ಅನುಭವವನ್ನು ಸ್ವಲ್ಪದರಲ್ಲಿ ಸ್ವಾರಸ್ಯಬರುವಂತೆ ಚಿತ್ರಿಸಿ, ತನ್ನ ಗುರುಗಳಿಗೂ ಆ ಸಮಾಚಾರ ತಿಳಿಸುವಂತೆ ಬಿನ್ನವಿಸಿಕೊಂಡು ಪತ್ರ ಬರೆದನು. ಶಂಕರಪ್ಪನು ಕಮತಗಿ ಸ್ವಾಮಿಗಳ ಅನುಜ್ಞೆ ತಕ್ಕೊಂಡು, ಇನ್ನೊಬ್ಬ ಪ್ರಮುಖನೊಂದಿಗೆ ಹೊರಟು, ಹುಚ್ಚಯ್ಯ ಮರಿಯನ್ನು ಕರೆದುಕೊಂಡು ಬರಲಿಕ್ಕೆ ಹುಬ್ಬಳ್ಳಿಗೆ ಹೋದನು. ಹೇಗೂ ತನ್ನ ಪ್ರತಿಜ್ಞೆಯಂತೆ, ತಕ್ಕಷ್ಟಟ್ಟಿಗೆ ಪಾಂಡಿತ್ಯ ಸಂಪನ್ನನಾಗಿರುವೆನಲ್ಲ ಎಂಬ ಆತ್ಮವಿಶ್ವಾಸದಿಂದ, ಊರಿಗೆ ದಯಮಾಡಿಸಲೆಬೇಕೆಂಬ ಪ್ರಮುಖರ ಕಳಕಳಿಯ ಕರೆಗೆ ಓಗೊಟ್ಟು, ಹುಚ್ಚಯ್ಯನು ತಮ್ಮೂರಿಗೆ ಹೊರಡಲಣಿಯಾದನು. ಮೂವರೂ ಕೂಡಿಕೊಂಡು, ಬಾಗಿಲಕೋಟೆಗೆ ಬಂದು, ಕೈ. ವಾ. ವೈಜಾಪೂರ ವೀರಭದ್ರಪ್ಪನ ಮನೆಯಲ್ಲಿಳಿದು ಮರುದಿನ ವೀರಭದ್ರಪ್ಪನೊಡನೆ ಕಮತಗಿಗೆ ಬಂದರು. ಮುರುಘಾರ್ಯ ಸ್ವಾಮಿಗಳು, "ಈಗಲೀಗ ನಿನಗೆ ಹುಚ್ಚೇಶ್ವರ ಮರಿದೇವರೆಂದು ಕರೆಯುವೆ" ಎಂದು ಆನಂದೋದ್ಗಾರ ತೆಗೆದು, ಹುಚ್ಚಯ್ಯನನ್ನು ಗಟ್ಟಿಯಾಗಿ ಅಪ್ಪಿಕೊಂಡರು. ಹುಚ್ಚೇಶ್ವರ ಮರಿದೇವರು ಮಹಾ ಕ್ಷೇತ್ರ ಕಾಶಿಗೆ ಹೋಗಿ,

ಸಂಸ್ಕೃತದಲ್ಲಿ ಇನ್ನೂ ಉಚ್ಚಶಿಕ್ಷಣ ಹೊಂದಿಬರುವ ಉತ್ಕಟೇಚ್ಛೆಯುಳ್ಳವರಾಗಿದ್ದಾರೆಂಬುದನ್ನೂ, ಹಾಗೂ ಅವರ ಅಲ್ಲಿನ ವಿದ್ಯಾಭ್ಯಾಸದ ವೆಚ್ಚಕ್ಕಾಗಿ, ತಾವು ಮೂರೂ ಮನೆತನದವರು ಧನ ಸಹಾಯ ಮಾಡಲು ಸಿದ್ಧರಿರುವರೆಂಬುದನ್ನೂ ವೀರಭದ್ರಪ್ಪನು ಸ್ವಾಮಿಗಳಲ್ಲಿ ಅರಿಕೆ ಮಾಡಿಕೊಂಡನು. ಮನಸ್ಸಿಲ್ಲದ ಮನಸ್ಸಿನಿಂದ ಸ್ವಾಮಿಗಳು ತಮ್ಮ ಮರಿದೇವರನ್ನು ಕಾಶಿಗೆ ಕಳಿಸಲು ಒಪ್ಪಿದರು. ಮರಿದೇವರು ಊರಲ್ಲಿ ಒಂದು ದಿನ ಮಾತ್ರವಿದ್ದು, ಕಾಶಿಗೆ ಪಯಣ ಕೈಕೊಂಡರು.

ಬೆಂಗಳೂರ 'ಶರಣಸಾಹಿತ್ಯ' ದ ಇಸ್ವಿ ೧೯೪೮ ರ ಸಂಪುಟ ೧೧, ಸಂಚಿಕೆ ೨ ರಿಂದ ತಿಳಿದುಬರುವದೇನಂದರೆ, ಕಾಶಿಯ ಶ್ರೀಮಜ್ಜಗದ್ಗುರು ವಿಶ್ವಾರಾಧ್ಯ ಪೀಠಾಧೀಶರ ಕಾಲದಲ್ಲಿ ನಾಡಿನ ಮೂಲೆ ಮೂಲೆಯಿಂದ ಮರಿಗಳು ಬಂದು, ಜಂಗಮವಾಡಿ ಮಹಾ ಮಠದಲ್ಲಿ, ಪ್ರಸಾದ ಸ್ವೀಕರಿಸುತ್ತ ಸಕಲ ಶಾಸ್ತ್ರಗಳಲ್ಲಿ ಪರೀಕ್ಷೆಕೊಟ್ಟು, ಪ್ರಮಾಣಪತ್ರ ಪಡೆದು, ಮರಳಿ ಸ್ವದೇಶಕ್ಕೆ ಬಂದು, ಪ್ರತಿಯೊಂದು ಪ್ರಾಂತದಲ್ಲಿನ ಗುರು ವಿರಕ್ತ ಮಠಗಳಿಗೆ ಸ್ವಾಮಿಗಳಾಗಿ ಮೆರೆಯುತ್ತಿರುವ ಪರಂಪರೆಯು ನೂರಾರು ವರ್ಷಗಳಿಂದಲೂ ಬಂದಿದೆಯಷ್ಟೆ ? ಅಲ್ಲಿ ಅಭ್ಯಾಸ ಮಾಡಿದವರಲ್ಲಿ ಸರ್ವಶ್ರೀ: (೧) ಕಮತಗಿ ಹುಚ್ಚಪ್ಪಯ್ಯನವರು. (೨) ಯಕ್ಕುಂಡಿ ಗುರುಸಿದ್ಧದೇವರು. (೩) ಮುಮ್ಮಡಾಪೂರ ಮಹಾದೇವ ಮರಿದೇವರು. (೪) ಸೊಲ್ಲಾಪುರ ಪಂಚಾಕ್ಷರ ಮರಿದೇವರು. (೫) ಅದವಾನಿ ಬಸವಲಿಂಗದೇವರು. (೬) ಮೈಸೂರ ಗೌರೀಶಂಕರ ಶಾಸ್ತ್ರಿಗಳು. (೭) ಲಿಂಗನಾಯಕನಹಳ್ಳಿ ಶಿವಲಿಂಗ ಮರಿದೇವರು. (೮) ಹೂಲಿ ಚರಮೂರ್ತಿಗಳು. (೯) ಅಬ್ಬಿಗೇರಿ ಪಟ್ಟದದೇವರು. (೧೦) ಕೋಡಂಗಲ್ಲದ ವಿರಕ್ತ ಸ್ವಾಮಿಗಳು. (೧೧) ಉಮಚಗಿ ಶಂಕರಶಾಸ್ತ್ರಿಗಳು (೧೨) ಪಗಡದಿನ್ನಿ ಕಲಿಗಣನಾಥಶಾಸ್ತ್ರಿಗಳು. (೧೩) ಅಬ್ಬಿಗೇರಿ ಸದಾಶಿವ ಶಾಸ್ತ್ರಿಗಳು. (೧೪) ಕೋಡಿಕೊಪ್ಪದ ಬಸವರಾಜಶಾಸ್ತ್ರಿಗಳು. (೧೫) ಕೊತಬಾಳ ನಾಗಭೂಷಣ ಶಾಸ್ತ್ರಿಗಳು. (೧೬) ಸೂಡಿ ಉಮಾಪತಿ ಶಾಸ್ತ್ರಿಗಳು ಇವರೆಲ್ಲರು ಗುರು–ವಿರಕ್ತರೆಂಬ ಭೇದಭಾವವಿಲ್ಲದೆ ನಡೆದುಕೊಳ್ಳುತ್ತಿದ್ದರು; ಕ್ರಿ. ಶ. ೧೯೦೮ ರಿಂದ ೧೯೩೫ ರೊಳಗಿನ ಅವಧಿಯಲ್ಲಿ ಕಾಶಿಯೊಳಗೆ ಇದ್ದರು.

ಇಸ್ವಿ ೧೯೦೮ ರಲ್ಲಿ ಹುಚ್ಚೇಶ್ವರ ಮರಿದೇವರು ಕಾಶಿಗೆ ಹೋಗಿರಬೇಕು; ೧೯೧೩ ರಲ್ಲಿ ವಿದ್ವನ್ಮಣಿಗಳಾಗಿ ತಿರುಗಿ ಕಮತಗಿಗೆ ಬಂದಿರಬೇಕು. ಅಂದರೆ, ಅವರು ಅಲ್ಲಿ ದಿ. **ಅಚ್ಯುತಪಂಡಿತರು,** ಮತ್ತು ದಿ. **ಶಿವಕುಮಾರ ಬ್ರಹ್ಮಚಾರೀಪಂಡಿತರು** ಇವರೇ ಮೊದಲಾದ ಮಹಾಮಹೋಪಾಧ್ಯಾಯರಲ್ಲಿ ವ್ಯಾಕರಣ, ವೇದಾಂತ ಮೊದಲಾದ ಶಾಸ್ತ್ರಗಳನ್ನು ಸುಮಾರು ಐದುವರ್ಷ ಕಾಲ ಅವ್ಯಾಹತವಾಗಿ ಅಭ್ಯಾಸ ಮಾಡಿರಬೇಕು. ಹುಚ್ಚೇಶ್ವರರಿಗೆ ಪದವಿ ಪರೀಕ್ಷೆಗಳ ಹವ್ಯಾಸವಿದ್ದಿಲ್ಲ; ಬಿರುದು ಬಾವಲಿಗಳ ಮೋಹವಿದ್ದಿಲ್ಲ. ಪರೀಕ್ಷೆಗಳಿಗಿಟ್ಟದ್ದಕ್ಕಿಂತ ಹೆಚ್ಚಾಗಿ ಗ್ರಂಥಗಳನ್ನು ಓದಿದರು; ಮುಖ್ಯವಾಗಿ , ಅನುಭವಕ್ಕೆ ಪ್ರಾಶಸ್ತ್ಯ ಕೊಟ್ಟರು. ಅಲ್ಲಿ ಅವರು ಅಭ್ಯಾಸದಲ್ಲಿ ತನ್ಮಯರಾಗಿದ್ದಾಗ, ಅವರಿಗೆ ನಗಾರಿ ನೌಬತ್ತುಗಳ ಸಪ್ಪಳವೂ ಕೇಳಬರುತ್ತಿದ್ದಿಲ್ಲವೆಂದು, ಕಂಪಲಿ ಪಂ. ಜಗನ್ನಾಥ ಶಾಸ್ತ್ರಿಗಳು ಹೇಳುತ್ತಿದ್ದುದು ಕಂಡು ಬರುತ್ತಿದೆ. ಅವರ ಪ್ರತಿಭೆ-ಪ್ರಾಮಾಣಿಕತೆಗಳಿಗೂ, ಉತ್ಸಾಹ-ಉತ್ಸುಕತೆಗಳಿಗೂ ಮುಗ್ಧರಾಗಿ, ಅವರ ಗುರುವರ್ಯರು ಮುಚ್ಚು—ಮರೆಯಿಲ್ಲದೆ ಅವರಿಗೆ ವಿದ್ಯೆಹೇಳಿಕೊಡುತ್ತಿದ್ದರು. ಗುರುಗಳಿಗೆ ಬಹಳ ಅಜಾರಿಯಾಗಿದೆಯೆಂದೂ, ಮತ್ತು ಕೂಡಲೆ ಊರಿಗೆ ಹೊರಟು ಬರಬೇಕೆಂದೂ ಬಿನ್ನಪಿಸಿ ಕಮತಗಿಯ ದೈವದವರು ಓಲೆ ಬರೆದಾಗ ಹುಚ್ಚೇಶ್ವರರು ಊರಿಗೆ ಹೋಗಲಿಲ್ಲ; ಆದರೆ, ಮುಂದೆರಡು ತಿಂಗಳು ತಡೆದು ತಮ್ಮಿಂದ ತಾವೇ ಕಮತಗಿಗೆ ಹೊರಟರು. ಆಗಮಾತ್ರ ಗುರುಗಳು ಸತ್ಯವಾಗಿ ತುಂಬಾ ಅಸ್ವಸ್ಥರಾಗಿದ್ದರು. ಸಂಸ್ಕೃತ ವಿದ್ಯೆಯ ವಿಜಯ ದುಂದುಭಿಯನ್ನು ಮೊಳಗಿಸುತ್ತ, ವೈರಾಗ್ಯದ ಕಹಳೆಯನ್ನು ಊದಿಸುತ್ತ, ಹುಚ್ಚೇಶ್ವರ ಮರಿದೇವರು ಸ್ವಪ್ರಾಂತಕ್ಕೆ ದಯಮಾಡಿಸಿದರು. ಭಕ್ತರು ಅವರನ್ನು ಬಹುಭಕ್ತಿ-ವೈಭವಗಳಿಂದ ಸ್ವಾಗತಿಸಿ, ಮಠಕ್ಕೆ ಕರೆತಂದರು.



# ೫ ವಿರಕ್ತ ಪಟ್ಟ, ಪವಿತ್ರ ಘಟ್ಟ.

ಸದ್ಭಕ್ತ ಸಮೂಹವನ್ನು ಎದುರಿಗಿಟ್ಟುಕೊಂಡು, ಮುರುಘಾರ್ಯ ಸ್ವಾಮಿಗಳು, "ನಮಗೆ ಪರಮಾತ್ಮನ ಅಪ್ಪಣೆಯಾಗಿದೆ. ವಿದ್ಯಾವಂತ ವಿರಕ್ತ ಹುಚ್ಚೇಶ್ವರ ಮರಿದೇವರು ಬಂದಿದ್ದಾರೆ. ನಮ್ಮ ಕಣ್ಮುಂದೆ ಅವರ ಪಟ್ಟ ಗಟ್ಟಿರಿ" ಎಂದು ಅಪ್ಪಣೆ ಪಡಿಸಿದರು. ಶಕ ೧೮೩೪ (ಕ್ರಿ. ಶ. ೧೯೧೨) ಪರಿಧಾವಿ ನಾಮ ಸಂವತ್ಸರ ಭಾದ್ರಪದ ಶುದ್ಧದಲ್ಲಿ ಕಮತಗಿಯೊಳಗೆ ಹುಚ್ಚೇಶ್ವರ ಮರಿದೇವರಿಗೆ ವಿಧಾನೋಕ್ತವಾಗಿ ಪಟ್ಟಗಟ್ಟಿದ್ದಾಯಿತು. ಗುರು ಮುರುಘಾರ್ಯ ಸ್ವಾಮಿಗಳು ಕೃಷಿಪಂಡಿತರಿದ್ದುದರಿಂದ ತಮ್ಮ ಅನುಭವಕ್ಕೆ ತಕ್ಕಂತೆ, ವಿದ್ಯಾವಂತನು ವ್ಯವಹಾರ ಜ್ಞಾನ ಸಂಪನ್ನನಾಗಿ ಕೃಷಿಯಕಡೆಗೆ ಹೆಚ್ಚು ಗಮನಹರಿಸಲೆಂಬ ದೃಷ್ಟಿಯಿಂದ, ಪಟ್ಟಾಭಿಷೇಕ ಮುಗಿದಕೂಡಲೆ **ಶ್ರೀ ಹುಚ್ಚೇಶ್ವರ ಸ್ವಾಮಿಗಳನ್ನು** ತಮ್ಮಬಳಿಗೆ ಕರೆಸಿಕೊಂಡು ಏಕಾಂತದಲ್ಲಿ, "ನೀವು ವಿದ್ಯಾವಂತರಾಗಿರುವಿರಿ; ಸಂಯಮಿಗಳಾಗಿರುವಿರಿ. ನಿಮಗೆ ಹೆಚ್ಚಿಗೇನು ಹೇಳುವುದಿದೆ? ೧ ಗೋದಲಿಯೊಳಗೆ ನಾಲ್ಕೆತ್ತು ಇರಬೇಕು. ೨ ಒಂದು ಹಗೇವು ಜೋಳ 'ಶಿಲುಕು' ಇರಬೇಕು. ೩ ದಡ್ಡಿಯೊಳಗೆ ಒಂದು ಕಣಿಕಿ ಬಣವಿ ಇರಬೇಕು. ೪'ಪಾಗಾ'ದೊಳಗೆ ಪಟ್ಟದಕುದುರೆ ಇರಬೇಕು. ೫ ಇನ್ನೊಬ್ಬರಿಗೆ ಕೈಯೊಡ್ಡದ ಸ್ಥಿತಿ ಇರಬೇಕು." ಎಂದು ಉಪದೇಶ ಮಾಡಿದರು. ಹುಚ್ಚೇಶ್ವರ ಸ್ವಾಮಿಗಳು ತಮ್ಮ ವಂಶಗುರುಗಳೂ ಹಾಗೂ ಅನುಗ್ರಹ ಗುರುಗಳೂ ಆದ ಮುರುಘಾರ್ಯರು ಉಪದೇಶಿಸಿದ ಮಾತುಗಳೈದನ್ನು ಪಾಲಿಸಲು ಅವರಿಗೆ ವಚನ ಕೊಟ್ಟರು. ಮುಂದೆ ೮-೧೦ ದಿನದಲ್ಲಿ ಗುರುಗಳು ನಿಶ್ಚಿಂತವಾಗಿ ಮಹಾಲಿಂಗದಲ್ಲಿ ಮರೆಯಾದರು.

ಹುಚ್ಚೇಶ್ವರ ಸ್ವಾಮಿಗಳ ಉಡುಪು-ತೊಡಪುಗಳ ಮೇಲಿಂದ, ಅವರು ವಿರಕ್ತಸ್ವಾಮಿಗಳೆಂದು ಗುರುತಿಸುವುದು ಕಠಿಣವಾಗಿತ್ತು. ತಲೆಯಮೇಲೆ ಜರದ ರೇಶಿಮೆಯ 'ಪೇಟ,' ಮೈಯಲ್ಲಿ ನಯವಾದ ಅಂಗಿ, 'ಸರ್ಜ ಕೋಟು',ಜಿನುಗು ಧೋತರ, ಪಾದದಲ್ಲಿ ಕಾನಪುರ ಮೊಚ್ಚೆ. ರಾಜಕುಮಾ

ರರಂತೆ ಒಪ್ಪುತ್ತಿದ್ದರು. ಅದೇ ಪೋಷಾಕಿನಲ್ಲಿ ತಾವು ಪಟ್ಟನಾದ ವರ್ಷವೇ ಲಿಂ. ಶ್ರೀ ಹಾನಗಲ್ಲ ಕುಮಾರ ಮಹಾ ಸ್ವಾಮಿಗಳವರ ಆಮಂತ್ರಣದಂತೆ, ಚವಡಿ ಜಾತ್ರೆಯೊಳಗೆ ಸೇರಿದ 'ಧರ್ಮಪ್ರಚಾರಕ ಸಭೆ' ಯಲ್ಲಿ ಭಾಗವಹಿಸಲು ಸ್ವಾಮಿಗಳು ಹೋಗಿದ್ದರು. ಅಲ್ಲಿ ನಡೆದ ಎರಡು **ಪಾವನ ಪ್ರಸಂಗ** ಗಳು ಲಕ್ಷಿಸತಕ್ಕವಾಗಿವೆ:—

೧ ಹಾನಗಲ್ಲ ಶ್ರೀ ಶ್ರೀಗಳವರು ಹುಚ್ಚೇಶ್ವರರಿಗೋಸ್ಕರ ಕಾವಿಯ ಕಪನಿ, ಕಾವಿಯ ಮಸ್ತಕ ಪಾವಡ, ಹಾವುಗೆಗಳನ್ನು ಗುಪ್ತವಾಗಿ ಅಣಿಗೊಳಿಸಿ ತರಿಸಿಟ್ಟಿದ್ದರು. ಸೂಕ್ಷ್ಮ ಚರ್ಚೆಯ ತರುವಾಯ ಶ್ರೀ ಶ್ರೀಗಳವರ ವಾದವನ್ನೊಪ್ಪಿ, ಹುಚ್ಚೇಶ್ವರರು ತಮಗಾಗಿ ಅಣಿಗೊಳಿಸಿಟ್ಟ ಪೋಷಾಕನ್ನು ಹಾಕಿಕೊಂಡೇ ಸಭೆಗೆಬಂದರು. ಊರಲ್ಲಿದ್ದಾಗ ಅವರು ಒಪ್ಪೊತ್ತು ಧೋತರವನ್ನುಟ್ಟು ಮಲಮಲ್ಲಿನ ಲಂಡಂಗಿ ತೊಡುತ್ತಿದ್ದರು. ಮಧ್ಯಾಹ್ನದ ಮೇಲೆ ಮಾತ್ರ ಕಾವಿಯ ಕಪನಿ ಹಾಕಿಕೊಂಡು, ತಲೆಗೆ ಕಾವಿಯ ಮಸ್ತಕ ಪಾವಡವನ್ನು ಸುತ್ತುತ್ತಿದ್ದರು.

೨. ಅಂದಿನ ಸಭೆಗೆ ಶ್ರೀಗಳವರು ತಮ್ಮ ಶಿವಯೋಗಮಂದಿರ ಸಂಸ್ಥೆಯಲ್ಲಿರುತ್ತಿದ್ದ ಕೈ. ವಾ. ನ್ಯಾಯಶಾಸ್ತ್ರ ಪಂಡಿತ **ಉಮಚಗಿ ಶಂಕರ ಶಾಸ್ತ್ರಿ**ಗಳನ್ನೂ ಕರೆಸಿಕೊಂಡಿದ್ದರು. ಅವರು ಆ ಶಾಸ್ತ್ರಿಗಳವರಿಗೂ, ಮತ್ತು ಹುಚ್ಚೇಶ್ವರ ಸ್ವಾಮಿಗಳಿಗೂ ಕೆಲವು ಹೊತ್ತು ಕೇವಲ ಸಂಸ್ಕೃತದಲ್ಲಿ ಶಾಸ್ತ್ರಾರ್ಥ ನಡೆಯುವಂತೆ ಏರ್ಪಾಡು ಮಾಡಿದರು. ಸಾಮಾನ್ಯ ಜನರಿಗೆ ಅವರ ಭಾಷೆ ಹಿಡಿಯದಿದ್ದರೂ, ಅವರ ನಿರರ್ಗಳ-ನಿರ್ಮಲ ಶೈಲಿಯಿಂದ ಪ್ರಭಾವಿತರಾಗಿ ಮಂತ್ರ ಮುಗ್ಧರಂತೆ ಕೇಳುತ್ತಿದ್ದರು. ಶ್ರೀ ಶ್ರೀಗಳವರಿಗೆ ಹುಚ್ಚೇಶ್ವರರ ಅಗಾಧ ವಿದ್ವತ್ತೆಯ ಪರಿಚಯವಾಗಿ, ಅಭಿಮಾನ ಉಕ್ಕಿ ಬಂದು, "ಕಾಶಿಯಿಂದ ವಿದ್ಯೆಯ ರಾಶಿಯನ್ನೇ ಹೊತ್ತು ತಂದ ಕಾಶೀ ಸ್ವಾಮಿಗಳು ತಾವು!" ಎಂದು ಅವರು ಉದ್ಗಾರ ತೆಗೆದರು. ಅಂದಿನಿಂದ ಹುಚ್ಚೇಶ್ವರ ಸ್ವಾಮಿಗಳಿಗೆ '**ಕಾಶೀ ಸ್ವಾಮಿ**'ಗಳು ಎಂಬ ಹೆಸರೂ ಬಳಕೆಗೆ ಬಂದಿತು. ಶ್ರೀ ಶ್ರೀಗಳವರು ಕಾಶೀ ಸ್ವಾಮಿಗಳನ್ನು ಶಿವಯೋಗಮಂದಿರ ಜಾತ್ರಾ ಮಹೋತ್ಸವಕ್ಕಾಗಿ ಪ್ರತಿವರ್ಷ ಬರಮಾಡಿಕೊಳ್ಳುತ್ತಿದ್ದರು.

## ೬ ವಿದ್ಯೆಯ ಪೀಠ, ಆದರ್ಶ ಪಾಠ.

ಹುಚ್ಚೇಶ್ವರ ಸ್ವಾಮಿಗಳು ಸಮಾಜದಲ್ಲಿ ವಿದ್ಯಾಪ್ರಚಾರ, ಸಂಸ್ಕೃತಿ ಪ್ರಸಾರಗಳಾಗಬೇಕೆಂಬ ದೃಢಸಂಕಲ್ಪದಿಂದ **‘ಶ್ರೀ ಹುಚ್ಚೇಶ್ವರ ಸಂಸ್ಕೃತ ಪಾಠಶಾಲೆ’** ಎಂಬ ಸಂಸ್ಥೆಯನ್ನು ಕಮತಗಿಯಲ್ಲಿ ಕ್ರಿ.ಶ.೧೯೧೩ ರಲ್ಲಿ ಸಂಸ್ಥಾಪಿಸಿದರು. ಆಧುನಿಕ ಮಾರ್ಗದ ಮೇಲೆ ಯೋಗ್ಯ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ದೊರಕಿಸಿಕೊಡಬೇಕೆಂದೂ, ಹಾಗೂ ತಮ್ಮ ಸರಸ್ವತೀ ಭಾಂಡಾರದಲ್ಲಿನ ವಿದ್ಯಾಸಂಪತ್ತಿಯನ್ನು ನಾಡಿನಲ್ಲಿ ಸೂರೆಗೈಯಬೇಕೆಂದೂ, ತಾವೇ ಸ್ವತಃ ಅಧ್ಯಾಪನ ವೃತ್ತಿಯನ್ನು ಕೈಕೊಂಡು, ವಿದ್ಯಾರ್ಥಿಗಳಿಗೆ ಭೋಜನ ವಸತಿಗಳ ಯೋಜನೆಮಾಡಿ, ಪಾಠ ಹೇಳಹತ್ತಿದರು; ಪಾಠಶಾಲೆಯನ್ನು ನಡೆಸಹತ್ತಿದರು. ಮೊದಮೊದಲು ಕಮತಗಿಯಲ್ಲಿ ಮುಷ್ಟಿ ‘ಫಂಡಿ’ನಿಂದ ಪಾಠಶಾಲೆ ನಡೆದರೂ, ಹಿಂದಿನಿಂದ ಅದು ಕೋಟೆಕಲ್ಲಿಗೆ ಸ್ಥಳಾಂತರವಾಯಿತು. ಸ್ವಾಮಿಗಳು ನಸುಕಿನಲ್ಲಿ ೪ ಗಂಟೆಗೆ ಎದ್ದು, ವಿದ್ಯಾರ್ಥಿಗಳಿಗೆ ಓದಲಿಕ್ಕೆ ಹಚ್ಚಿ ತಾವು ಸ್ನಾನ–ಪೂಜಾದಿಗಳಲ್ಲಿ ತೊಡಗುವರು; ಮುಂಜಾನೆ ೭ ರಿಂದ ೧೦ ರ ವರೆಗೂ, ಇಳಿಹೊತ್ತು ೨ ರಿಂದ ೫ ಗಂಟೆಯವರೆಗೂ, ಅವಿಶ್ರಾಂತವಾಗಿ ಉಚ್ಛ್ವಾತ್ರಿದಂತೆ ಪಾಠ ಹೇಳುವರು. ಅವರ ಪಾಠಪ್ರವಚನಗಳೆಂದರೆ, ವಿದ್ಯಾರ್ಥಿಗಳಿಗೊಂದು ಅಮೃತ ಸಿದ್ಧಿಯೋಗ, ಜ್ಞಾನಯಾಗ. ವಾರಕ್ಕೊಂದಾವರ್ತಿ, ಪಾಠಶಾಲೆಯ ಪರವಾಗಿ ಚರ್ಚಾಕೂಟ ನಡೆಯುತ್ತಿತ್ತು. ಅಲ್ಲಿ ಬೇರೆ ಸದ್ಗೃಹಸ್ಥರಿಗೂ ಚರ್ಚೆಯಲ್ಲಿ ಭಾಗ ವಹಿಸಲು ಒಮ್ಮೊಮ್ಮೆ ಅವಕಾಶ ಕಲ್ಪಿಸಿಕೊಡಲಾಗುತ್ತಿತ್ತು. ಪಕ್ಷಕ್ಕೊಂದಾವರ್ತಿ, ವಿದ್ಯಾರ್ಥಿಗಳ ಪರೀಕ್ಷೆ ತಕ್ಕೊಳ್ಳುವ ಪದ್ಧತಿಯಿತ್ತು.

ಈ ತೆರನಾಗಿ ಸಾಗಿದ ಪಾಠಶಾಲೆಯ ಕಾರ್ಯ ಕಲಾಪಗಳನ್ನು ಕಣ್ಣಾರೆ ಕಂಡು, ಗುಳೇದಗುಡ್ಡದ ಭಕ್ತರಲ್ಲಿ ಕೆಲವರು ತಾವೇ ಮುಂದೆ ಬಂದು, ಸ್ವಾಮಿಗಳ ಸಂಸ್ಥೆಗೆ ಮುಖ್ಯ ಸಹಾಯಕರಾಗಿ ನಿಂತರು. ಅವರು ಯಾರು ಯಾರಂದರೆ, ಸರ್ವ ಶ್ರೀ ೧. ರಾಚಯ್ಯ ವಸ್ತ್ರದ. ೨. ಗಂಗಪ್ಪ ಎಕ್ಕೇಲಿ. ೩. ನರಸಪ್ಪ ಕಲಬುರ್ಗಿ ಮತ್ತು ಮಲ್ಲಪ್ಪ ಚಿನಿವಾಲರ. ೪. ರುದ್ರಪ್ಪ ಶೀಲವಂತ

೫. ಸಂಗಪ್ಪ ಕಡಿಬಾಗಿಲ. ೬. ಸಂಗಪ್ಪ ಕಡ್ಡಿಮಟ್ಟಿ. ೭. ಬಸಪ್ಪ ಮಂಟಾ. ೮. ಬಸಪ್ಪ ಬಣಗಾರ. ೯. ಸಂಗನಬಸಪ್ಪ ಪಲ್ಲೇದ. ೧೦. ಮುರಿಗೆಪ್ಪ ಶಿಪ್ರಾ. ೧೧. ಮಲ್ಲಪ್ಪ ಘಟ್ಟದ. ೧೨. ಶಿವಪ್ಪ ಉಂಕಿ ಮತ್ತು ಮುರಿಗೆಪ್ಪ ರಾಜನಾಳ ಈ ವ್ಯಾಪಾರಸ್ಥರು ತಂತಮ್ಮ ಅಂಗಡಿಗಳಿಂದ ಪಾಠಶಾಲೆಯ ಒಂದೊಂದು ತಿಂಗಳ ವೆಚ್ಚವನ್ನು ಹೊತ್ತು, ನಿಯಮಿತವಾಗಿ ಧನ ಸಹಾಯ ಮಾಡಿದರು. ಮಠದ ಇತರ ಖರ್ಚನ್ನು ಗುಳೇದಗುಡ್ಡ, ಕೋಟೆಕಲ್ಲುಗಳ [illegible] ಯಾವತ್ತು ಭಕ್ತಾದಿಗಳು ನೀಡಿಕೊಂಡರು. ಸ್ವಾಮಿಗಳು ತಮ್ಮ ಗುರುಗಳ ಹೇಳಿಕೆಯಂತೆ, ದುಡ್ಡು ದುಗ್ಗಾಣಿಗಾಗಿ ಒಬ್ಬರ ಮುಂದೆ ಕೈ ಚಾಚಲಿಲ್ಲ.

ಸ್ವಾಮಿಗಳವರ ವಿದ್ಯಾ ಹೇಳುವ ಶೈಲಿ, ಹಾಗೂ ಸದ್ಬೋಧಾಮೃತ ಉಣಿಸುವ ರೀತಿ–ಗಳು ಅತ್ಯಂತ ಆಕರ್ಷಕವಾಗಿದ್ದುವಷ್ಟೆ? ಇದರಿಂದಾಗಿ, ದೇಶದ ನಾಲ್ಕೂನಿಟ್ಟಿನಿಂದ ಅವರ ಪಾಠಶಾಲೆಗೆ ವಿದ್ಯಾರ್ಥಿಗಳು ಆಸೆಯಿಂದ ಧಾವಿಸಿ ಬರುತ್ತಿದ್ದರು. ಅವರಲ್ಲಿ ಓದಿ ಕೀರ್ತಿಶಾಲಿಗಳಾದ ಕೆಲವು ಶಿಷ್ಯೋತ್ತಮರ ಹೆಸರು ಹೇಳಬೇಕೆಂದರೆ ೧. ಕಮತಗಿ ಎತ್ರಾಮಿ ಮಠದ ಚನ್ನವೀರ ಶಾಸ್ತ್ರಿಗಳು. ೨. ಹಳ್ಳೂರ ಸಿದ್ಧಲಿಂಗಯ್ಯನವರು. ೩. ಕುಟುಕನಕೇರಿ ಹುಚ್ಚಯ್ಯನವರು. ೪. ಕೋಟೆಕಲ್ಲ ಮುಪ್ಪಯ್ಯನವರು. (ಕೋಟೆಕಲ್ಲ ಹಿರೇಮಠದ ೧೧ನೆಯ ಶ್ರೀಶ್ರೀಗಳು) ೫. ಹಾಲಕೊಪ್ಪದ ಬಸವರಾಜ ಪಟ್ಟದದೇವರು. (ಬಾಳೆಹಳ್ಳಿ ಜಗದ್ಗುರುಗಳು) ೬. ಲೋಕಾಪುರ ಚರಮೂರ್ತಿಗಳು. ೭. ಸವದಿ ಸಂಗನಬಸವ ಮರಿದೇವರು. ೮. ಸನಗಂಡಿ ಪಟ್ಟದ ದೇವರು. ೯. ಇಟಗಿ ಅನ್ನದಾನ ಶಾಸ್ತ್ರಿಗಳು. ೧೦. ಹುನಗುಂದ ವೀರಭದ್ರಶಾಸ್ತ್ರಿಗಳು. ೧೧. ಮೋದಿಗಿ ಪಟ್ಟದ ದೇವರು. ೧೨. ಚಿಮ್ಮಲಗಿ ಪಟ್ಟದ ದೇವರು. ೧೩. ಅಮರಾವತಿ ಅಮರಯ್ಯನವರು. ೧೪. ಮೈಸೂರ ಶಂಭುಲಿಂಗದೇವರು [ವಿದ್ಯಾವಾಚಸ್ಪತಿ ಶಂಭುಲಿಂಗ ಸ್ವಾಮಿಗಳು] ೧೫. ಬೆಳಗಲ್ಲ ಚರಮೂರ್ತಿಗಳು. ೧೬. ಜಮಖಂಡಿ ವಿರಕ್ತ ಮರಿದೇವರು. [ಉಪ್ಪೇರಿ ಮಠದಸ್ವಾಮಿಗಳು] ೧೭. ಅಥಣಿ ಚನ್ನಬಸವ ಮರಿದೇವರು. ೧೮. ಕಲಬುರ್ಗಿ ಶಿವಮೂರ್ತಿ ಸ್ವಾಮಿಗಳು. ೧೯. ಹಲಗಲಿ ಶರಣಪ್ಪನವರು. ೨೦. ಹುನಗುಂದ ಗಚ್ಚಿನ ಮಠದ ಮುರಿಗೆಪ್ಪನವರು. ೨೧. ಬಾಗಿಲಕೋಟೆ ಅಡಿವೆಯ್ಯ ಮರಿದೇವರು.

[ಟಿಂಗಿನಮಠದ ಸ್ವಾಮಿಗಳು] ೨೨. ಹಾವರಗಿ ಸೊಪ್ಪಿನಮಠದ ಚನ್ನಸಂಗಯ್ಯನವರು ಮೊದಲಾದ ೪೦ ವಿದ್ಯಾರ್ಥಿಗಳು ಪಾಠಶಾಲೆಯಲ್ಲಿದ್ದರು. ಕೋಟಿಕಲ್ಲ ಪಾಠಶಾಲೆಯು ಶಾಶ್ವತ ಪಾಠಶಾಲೆ; ಸ್ವಾಮಿಗಳು ಕಮಠಗಿಯಲ್ಲಿ ಇರುತ್ತಿದ್ದಾಗ ಅದು ಸ್ಥಾನಿಕ ಪಾಠಶಾಲೆಯಾಗುತ್ತಿತ್ತು. ಒಂದೊಂದು ಸಲ ಅದು ಸಂಚಾರಕ ಪಾಠಶಾಲೆಯಾಗಿಯೂ ಪರಿಣಮಿಸುತ್ತಿತ್ತು: ನಾಗುಕಲ್ಲ, ಹುಬ್ಬಳ್ಳಿಗಳಲ್ಲಿ ಪಾಠಶಾಲಾಧ್ಯಾಪಕರಾಗಿದ್ದ ಶ್ರೀ. ಪಾ. ಪಂ. ಗುರುಮೂರ್ತಿ ಶಾಸ್ತ್ರಿಗಳವರು ಬಾಗಿಲಕೋಟೆಯ ವಾರದ ಪಾಠಶಾಲೆಯ ಅಧ್ಯಾಪಕರಾಗಿ ನೇಮಕ ಹೊಂದಿದರು. ಅವರೊಮ್ಮೆ ಜಡ್ಡಿನಿಂದ ಹಾಸಿಗೆ ಹಿಡಿದಾಗ, ಪಾಠಶಾಲೆಯು ಕೆಲದಿನ ನಿಂತುಹೋಗುವ ಪರಿಸ್ಥಿತಿ ಬರುವ ಸಂಭವವಿದೆಯೆಂಬುದನ್ನು ಅರಿತುಕೊಂಡು, ಮುಕ್ತೇಶ್ವರ ಸ್ವಾಮಿಗಳು ತಮ್ಮ ವಿದ್ಯಾಗುರುಗಳ ಋಣವನ್ನು ತೀರಿಸುವದಕ್ಕಾಗಿಯೂ, ಹಾಗೂ ಶೈಕ್ಷಣಿಕ ಕಾರ್ಯಕ್ಕೆ ಮಧ್ಯದಲ್ಲಿ ಒದಗಿದ ಅಡೆತಡೆಯನ್ನು ಹೋಗಲಾಡಿಸುವದಕ್ಕಾಗಿಯೂ, ತಾವು ತಮ್ಮ ವಿದ್ಯಾರ್ಥಿ ವೃಂದವನ್ನೊಡಗೊಂಡು, ಅಲ್ಲಿಗೆ ಹೋಗಿ, ಶಾಸ್ತ್ರಿಗಳು ಗುಣಮುಖರಾಗುವ ತನಕ ಅಂದರೆ, ಕನಿಷ್ಟ ಮೂರು ತಿಂಗಳ ತನಕ ಎರಡೂ ಪಾಠಶಾಲೆಗಳನ್ನು ಬಿಡುವಿಲ್ಲದೆ ಒಳ್ಳೇ ಬಿಗುವಿನಿಂದ ಸಾಗಿಸಿದರು. ಹೈಸ್ಕೂಲ-ಕಾಲೇಜುಗಳಲ್ಲಿನ ಪ್ರೌಢ ವಿದ್ಯಾರ್ಥಿಗಳು ದೀಪಾವಳಿ-ಬೇಸಿಗೆಗಳ ಬಿಡುವಿನಲ್ಲಿ ಸ್ವಾಮಿಗಳಿದ್ದಲ್ಲಿಗೆ ಹೋಗಿ, ಸಂಸ್ಕೃತಪಾಠ ಹೇಳಿಸಿಕೊಳ್ಳುತ್ತಿದ್ದರು. ಉದಾಹರಣೆಗಾಗಿ ಕೆಲವರ ಹೆಸರನ್ನು ಸೂಚಿಸುವದಾದರೆ, ಸರ್ವಶ್ರೀ ಹುನಗುಂದ ಮಠದ ಗುರುಬಸವಾರ್ಯ (ನಿವೃತ್ತ ಹೈಸ್ಕೂಲ ಶಿಕ್ಷಕರು); ಸೊಳಿಭಾವಿ ವ್ಹಿ. ಎಸ್. ಲೂತಿಮಠ (ವಕೀಲರು); ತಿರೂರ ಎಸ್. ಟಿ. ಪಾಟೀಲ (ವಕೀಲರು); ಇಸ್ಲಲಗಿ ಇಂಜಗನೇರಿ ಸಿದ್ಧರಾಮಪ್ಪ (ಶಿವಾಧೀನ-ಮಾಮಲೇದಾರರು) ಮುಂತಾದವರು. ಒಟ್ಟಿಗೆ, ಕೋಟಿಕಲ್ಲ ಪಾಠಶಾಲೆಯು ಆದರ್ಶಪ್ರಾಯವಾಗಿತ್ತು. ಸ್ವಾಮಿಗಳು ಅದನ್ನು ಅತ್ಯಂತ ವಿಶಾಲ ಭಾವನೆಯಿಂದ ನಡೆಸಿಕೊಂಡು ಹೋಗುತ್ತಿದ್ದರು. ಅವರು ಬಹು ದಿನ ಬಾಳಲಿಲ್ಲ-- ಕನ್ನಡಿಗರ ದುರ್ದೈವಕ್ಕಾಗಿ, ಅವರ ತಮ್ಮ ೨೭ ನೆಯ ವಯಸ್ಸು ನಡೆಯುತ್ತಿದ್ದಾಗಲೆ ದೇಹ ಬಿಡುವ ಹೊತ್ತು ಬಂದಿತು. ಮಾಡಬೇಕೇನು? ಅವರ ಮನಸ್ಸಿನಲ್ಲಾದರೋ ಬಹಳವಿತ್ತು. ತಮ್ಮ ಪಾಠಶಾ

ಲಿಯು ಸಮಾಜ ಶಿಕ್ಷಣ ಕೇಂದ್ರವಾಗಬೇಕು; ಅಧ್ಯಾತ್ಮ ಪೀಠವಾಗಬೇಕು; ಸಂಸ್ಕೃತ ಮಹಾ ವಿದ್ಯಾನಿಲಯವಾಗಬೇಕು; ಬರಬರುತ್ತ ಅದು ಸಂಸ್ಕೃತ ವಿಶ್ವ ವಿದ್ಯಾ ನಿಲಯವಾಗಿ ಮಾರ್ಪಡಬೇಕು– ಎಂಬ ಉದಾತ್ತ ವಿಚಾರಗಳು ಅವರ ಮುಖದಿಂದ ಆಗಾಗ ಹೊರಬೀಳುತ್ತಿದ್ದುದು ತಿಳಿದು ಬರುತ್ತಿದೆ.



## ೭ ತತ್ತ್ವ ಬೋಧ, ಸರ್ವ ಜನಮೋದ.

ಹುಚ್ಚಪ್ಪಯ್ಯನವರ ಸುಮಾರು ೧೪ ಮಠಗಳಲ್ಲಿ ಕೋಟೆಕಲ್ಲ ಹಾಗೂ ಕಮತಗಿ ಮಠಗಳೆ ದೊಡ್ಡವು. ಆವೆರಡೂ ಮಠಗಳಲ್ಲಿ ಹುಚ್ಚೇಶ್ವರ ಸ್ವಾಮಿಗಳಿದ್ದ ಕಾಲಕ್ಕೆ ದಾಸೋಹವಿತ್ತು- ಅತಿಥಿ-ಅಭ್ಯಾಗತರಿಗೆ ಪ್ರಸಾದದ ಕೊರತೆಯಿದ್ದಿಲ್ಲ. ಸ್ವಾಮಿಗಳಿದ್ದೆಡೆಯಲ್ಲಿ ನಿತ್ಯವೂ ಶಿವಾನುಭವ ಪ್ರವಚನ ನಡೆಯುತ್ತಿತ್ತು. ಅವರು ಭಕ್ತರಿಗೆ ವೇದಾಗಮೋಪನಿಷತ್ತು, ಶಾಸ್ತ್ರ-ಪುರಾಣ-ಕಾವ್ಯಗಳ ಆಧಾರ ಕೊಟ್ಟು ಕೊಟ್ಟು, ಅಲ್ಲಲ್ಲಿ ವಚನ ವಾಙ್ಮಯ ಬಳಸುತ್ತ, ಒಳ್ಳೇ ಪರಿಣಾಮಕಾರಿಯಾಗುವಂತೆ ಬೋಧಿಸುತ್ತಿದ್ದರು. ಅವರ ವಾಣಿಯಲ್ಲಿ ಪಾಂಡಿತ್ಯಾನುಭವಗಳ ಜೊತೆಗೆ, ವಾಕ್ಪಟುತ್ವವೂ ನೆಲೆಗೊಂಡಿತ್ತು. ಅವರು ಜನಾಂಗದಲ್ಲಿ ಬೇರೂರಿದ ಅಂಧ ಶ್ರದ್ಧೆಯನ್ನೂ, ಮತ್ತು ಸಂಕುಚಿತ ಮನೋವೃತ್ತಿಯನ್ನೂ ಹೊಡೆದು ಹಾಕಲು ಹೆಣಗಾಡಿದರು. ಮಾನವ ಧರ್ಮ ಪ್ರಚಾರಕ್ಕಾಗಿಯೇ ಅವರು ಬದ್ಧ ಕಂಕಣರಾಗಿದ್ದರು. ಅವರು ತಾವೆ ಸ್ವತಃ ಪುರಾಣ ಪ್ರವಚನಗಳ ಮೂಲಕ ವರ್ಷದಲ್ಲಿ ಕೆಲವು ದಿನ ಕೋಟೆಕಲ್ಲೊಳಗೆ- ಕೆಲವು ದಿನ ಕಮತಗಿಯೊಳಗೆ- 'ಜ್ಞಾನ ದಾಸೋಹ'ವನ್ನು ತೆರೆದು ಜನ ಜಾಗೃತಿ ಮಾಡುತ್ತಿದ್ದರು. ಆಗಿನ ಪುರಾಣಿಕರ ಮೇಲೆಯೂ ಅವರಿಗೆ ಅಷ್ಟೊಂದು ವಿಶ್ವಾಸವಿದ್ದಿಲ್ಲ; ಯಾಕೆಂದರೆ ಆ ಪುರಾಣಿಕರು ಅದ್ಭುತ-ಶೃಂಗಾರ-ಹಾಸ್ಯ ರಸಗಳನ್ನೆ ಬಹಳ ಮಟ್ಟಿಗೆ ಬೆರಿಸಿ, ಪುರಾಣ-ಪ್ರವಚನ ಮಾಡುತ್ತಿದ್ದುದರಿಂದ ಪುರಾಣದ ನಿಜವಾದ ಉದ್ದೇಶವು ಫಲಿಸುತ್ತಿಲ್ಲವೆಂದು ಸ್ವಾಮಿಗಳ ಸ್ಪಷ್ಟಾಭಿಪ್ರಾಯವಾಗಿತ್ತು.

ಕೋಟೆಕಲ್ಲಲ್ಲಿ ಆಗಾಗ ಜರಗುತ್ತಿದ್ದ ವೇದಾಂತ ಪ್ರವಚನಕ್ಕೆ ಗುಳೇದಗುಡ್ಡ ದಿಂದ ತಪ್ಪದೆ ಬರುವ ವಿಧರ್ಮೀಯರಲ್ಲಿ ವ್ಯ ಶ್ರೀ ೧. ಸೋಳಿಭಾವಿ ವಾಸಪ್ಪ. ೨. ಪರಪ್ಪ ಹೂಲ್ಲೂರ. ೩. ಚನಬಸಪ್ಪ ಹೊಸಮನಿಗೌಡರ. ೪. ಪಾಂಡಪ್ಪ ಪರೂತಿಕರ (ರಾವಜಿ). ೫. ಎಲಗೂರ ಭಟ್ಟಿ ಜೋಶಿ. ೬. ಮೇಘರಾಜ ಶೇಡಜಿ ಮಾಲಪಾಣಿ. ೭. ಕನ್ನಾರಾಮ ಮೊದಲಾದವರು ಪ್ರಮುಖರೆಂದು ಹೇಳಬಹುದು. ಕಮತಗಿಯಲ್ಲಿ ಸ್ವಾಮಿಗಳಿದ್ದಾಗ ವೇದಾಂತ ಪ್ರವಚನಕ್ಕೆ ಪ್ರತಿ ರವಿವಾರ ಹುನಗುಂದದಿಂದ ಬರುತ್ತಿದ್ದವರೆಂದರೆ, ವ್ಹಿ. ವಾ. ಶಿರೋಳಕರ ಬಂಡೇರಾವ ಮಾಮಲೇದಾರರು, ಮತ್ತು ವ್ಹಿ. ವಾ. ಕುಲಕರ್ಣಿ ಫೌಜದಾರರು. ಇದೆಲ್ಲವನ್ನು ನಿರೀಕ್ಷಿಸಿದರೆ, ಸ್ವಾಮಿಗಳವರ ಪುರಾಣ-ಪ್ರವಚನಗಳಲ್ಲಿ ಸರ್ವಸರ್ಮ ಸಮನ್ವಯ ತತ್ವ್ವವು ಹೇಗೆ ಹುದುಗಿತ್ತೆಂಬುದು ಮನವರಿಕೆಯಾಗದಿರದು. ಸರ್ವಧರ್ಮದವರಿಗೂ ರುಚಿಸುವಂತೆ ಹಿತವಾಗಿ-ಮಿತವಾಗಿ, ಸಮಯಕ್ಕೆ ಉಚಿತವಾಗಿ-ಖಚಿತವಾಗಿ ಮಾತನಾಡುವ ಕಲೆಯು ಅವರಿಗೆ ಚೆನ್ನಾಗಿ ಸಾಧಿಸಿತ್ತು. ಆದುದರಿಂದ ಕಾಶೀ ಸ್ವಾಮಿಗಳೆಂದರೆ, ಲಿಂಗಾಯತರಷ್ಟೆ ಇತರ ಧರ್ಮದವರೂ ಅವರ ಪೀಠದ ವಿಷಯಕ್ಕೆ ಅಭಿಮಾನಪಡುತ್ತಿರುವರು; ಇಂದಿಗೂ ಪೂಜ್ಯ ಭಾವನೆಯುಳ್ಳವರಾಗಿರುವರು.



## ೮ ಮಾತಿನ ಕಲೆ, ಹಿಗ್ಗಿನ ಸೆಲೆ!

ಲೋಕೋನ್ನತಿಗಾಗಿ ಸ್ವಾಮಿಗಳವರು ಆವಶ್ಯಕ ವೆನಿಸಿದಾಗೆಲ್ಲ ಆಮಂತ್ರಿತರಾಗಿ ಅಲ್ಲಲ್ಲಿ ಸಣ್ಣ ಸಣ್ಣ ಸಂಚಾರ ಕೈಕೊಳ್ಳುತ್ತಿದ್ದರು. ಅವುಗಳೊಳಗೆ ಕ್ರಿ. ಶ. ೧೯೧೬-೧೭ ರಲ್ಲಿ ನಡೆದ ಮೂರು ನಾಲ್ಕು ಘಟನೆಗಳನ್ನು ಉದಾಹರಿಸಬೇಕಂದರೆ;—

೧. ಸ್ವಾಮಿಗಳು ಬಾಗಿಲಕೋಟೆಯಲ್ಲಿ ಇದ್ದಾಗ ಕೈ. ವಾ. **ಮೋಟಗಿ ಘಟ್ಟಿ** ಬಸವಪ್ಪನ ಹೇಳಿಕೆಯಂತೆ, ಮುದ್ದೇಬಿಹಾಳ ತಾಲೂಕಿನ ಕಾಳಗಿ **ನಿಡಗುಂದಿಗೆ** ಅಲ್ಲಿನ ಮುಖಂಡರೊಬ್ಬರ ಔತಣ ಹಿಡಿದು ಹೋಗಬೇಕಾ

ಯಿತು. ಆಗ ಅಲ್ಲಿ ಲಿಂಗಾಯತ ಸಮಾಜವೆಲ್ಲ ಬಹಳಮಟ್ಟಿಗೆ ಆಚಾರ-ವಿಚಾರಗಳ ದೃಷ್ಟಿಯಿಂದ- ಪಕ್ಷ-ಪಂಗಡಗಳ ತಿಕ್ಕಾಟದಿಂದ ಹದಗೆಟ್ಟು ಹೋಗಿತ್ತು. ಅದನ್ನು ಎತ್ತಿ ಹಿಡಿದು ಹವಕ್ಕೆ ತರಬೇಕೆಂದು ಎಂತೆಂತಹ ಸ್ವಾಮಿಗಳೋ ಸಾಹಸಬಟ್ಟಿದ್ದರು; ಅದೆಲ್ಲ ಹೊಳೆಯಲ್ಲಿ ಹುಣಸೀಹಣ್ಣು ತೊಳೆದಂತಾಗಿತ್ತು. ಹುಕ್ಕೇರಿಶ್ವರ ಸ್ವಾಮಿಗಳು ತಮ್ಮ ವಾಣಿಯೆಂಬ ಅಸ್ತ್ರವನ್ನು ದೈವದ ಮೇಲೆ ಪ್ರಯೋಗಿಸಿ ನೋಡಿದರು. ಪ್ರಯತ್ನ ಫಲಿಸಿತು. ಪಶ್ಚಾತ್ತಾಪದಿಂದ ಹೃದಯ ಪರಿಶುದ್ಧವಾಗುವದಷ್ಟೇ? ಸ್ವಾಮಿಗಳು ಶುದ್ಧೀಕರಣ ತತ್ತ್ವದ ಮೇಲೆ ಶಿವದೀಕ್ಷಾ ಸಮಾರಂಭವನ್ನು ಹೂಡಿದರು; ಪತಿತರನ್ನು ಪಾವನಗೊಳಿಸಿದರು. ಇತರ ಧರ್ಮದವರ ಮೇಲೂ ಇದರ ಪರಿಣಾಮವಾಗಿ ಅವರೂ ನೀತಿ ಮತ್ತೆಯ ಕಡೆಗೆ ಗಮನಕೊಡಹತ್ತಿದರು. ಈಗಲೂ ನಿಡಗುಂದಿಯ ಜನರು "ನಮ್ಮೂರು ಕಮತಗಿ ಹುಚ್ಚಪ್ಪಯ್ಯನವರಿಂದಲೆ ಸುಧಾರಿಸಿತು!" ಎಂದು ಹಾಡಿ ಹರಸುತ್ತಿರುವರು.

೨. ಬಾಗೇವಾಡಿ ತಾಲೂಕಿನ **ಮನಗೂಳಿಗೆ** ೧೧ ಮಂಟಪ ಪ್ರೋತ್ಸವದ ನಿಮಿತ್ತವಾಗಿ, ಅಲ್ಲಿನ ಪೂಜ್ಯ ಹಿರೇಮಠದ ಪಟ್ಟಾಧ್ಯಕ್ಷರ ಆದರದ ಆಮಂತ್ರಣವನ್ನು ಸ್ವೀಕರಿಸಿ, ಸ್ವಾಮಿಗಳವರು ಹೋಗಿದ್ದರು. ಅಲ್ಲಿ ಜನರಿಗೆ ಅಗ್ರ ತಾಂಬೂಲ ಸಿಕ್ಕಿತು.. ಅವರು ತಮ್ಮ ಮೂರುದಿನದ ವಾಸ್ತವ್ಯದಲ್ಲಿ ತಮ್ಮ ಅಮೌಲ್ಯ ಭಾಷಣಗಳಿಂದ ಜನತೆಯೊಳಗೆ ನವ ಚೈತನ್ಯವನ್ನು ತುಂಬಿದರು; ಅಲ್ಲದೆ, ವಿರಕ್ತರಲ್ಲಿ ಕೂಡಲೆ ತಿಳಿಯಬೇಕಾದ ಸಮಯಭೇದ, ಗುರು—ವಿರಕ್ತರಲ್ಲಿ ಎಂದಿಗೂ ಉಳಿಯಬೇಕಾದ ಸಂಘಟನಾ ನಾದ-ಅವೆರಡರ ಕಡೆಗೇನೆ ಸಭಿಕರ ಲಕ್ಷ ಸೆಳೆದು, ವೀರಶೈವರ ಏಳಿಗೆಯು ಆವೆರಡು ಅಳಿವು—ಉಳಿವುಗಳನ್ನೇ ಹೆಚ್ಚಾಗಿ ಅವಲಂಬಿಸಿದೆಯೆಂಬುದಾಗಿ ಒತ್ತಿ ಹೇಳಿದರು.

೩. ಹುಕ್ಕೇರಿಶ್ವರ ಸ್ವಾಮಿಗಳು ಮನಗೂಳಿ ಕಾರ್ಯಕ್ರಮಗಳನ್ನು ತೀರಿಸಿಕೊಂಡು, ಅಥಣಿ ಗಚ್ಚಿನಮಠದ ಲಿಂ. ಸಿದ್ಧಲಿಂಗ ಮಹಾ ಸ್ವಾಮಿಗಳ ನೇತೃತ್ವದಲ್ಲಿ, ಲಿಂ. ಶ್ರೀ ಮುರುಘಾರಾಜೇಂದ್ರ ಮಹಾಶಿವಯೋಗಿಗಳವರ ಭಕ್ತಿಯ ಕುರುಹಾಗಿ, ಶಕ ೧೮೩೮ ಮಾರ್ಗಶಿರ ಶು. ೧೫ ರಂದು ಜರ

ಗಲಿದ್ದ ೬೩ ಪುರಾತನರ ಮಂಟಪ ಪೂಜಾ ಮಹೋತ್ಸವಕ್ಕೆ ಉಪನ್ಯಾಸಕ ರಾಗಿ, ಒಂದೆರಡು ದಿನ ಮುಂಚೆಯೇ ತಮ್ಮ ವಿದ್ಯಾರ್ಥಿ ಪರಿವಾರದೊಂದಿಗೆ ಹೋದರು. ಅಧ್ಯಾತ್ಮದಂತಹ ಗಡುಚಾದ ವಿಷಯವನ್ನು ಸರ್ವಸಾಮಾನ್ಯರ ಮನಸ್ಸಿನ ಮೇಲೆಯೂ ಬಿಂಬಿಸುವಂತೆ ಪ್ರತಿಪಾದಿಸಿ, ೬೩ ಮಂದಿ ಪುರಾತನರ ಜೀವನ ಚರಿತ್ರೆಗಳ ಹಿನ್ನೆಲೆಯಲ್ಲಿನ ಸ್ವಾರಸ್ಯದ ಸಾರ ಸರ್ವಸ್ವವನ್ನು ತಮ್ಮ ಅಮೃತವಾಣಿಯಿಂದ ಸ್ವಾಮಿಗಳು ಮೂರುದಿನಪರ್ಯಂತರ ನಿರೂಪಿಸಿದರು. ಅವರ ಉಪನ್ಯಾಸದಿಂದ ಅಥಣಿ ಶಿವಯೋಗಿಗಳಿಗಾದ ಹಿಗ್ಗು ಅಷ್ಟಿಷ್ಟಲ್ಲ. ಮುಕ್ತಾಯ ಸಮಾರಂಭದ ಕಾಲಕ್ಕೆ, ಅವರು ಹುಚ್ಚೇಶ್ವರರನ್ನು ಅಪ್ಪಿಕೊಂಡಾಗ ಅಂತಃಕರಣ ಸೂಸಿಬಂದು, "ಏನಪ್ಪಾ, **ತಾವು ಹುಚ್ಚಪ್ಪ ಆದರೂ ಮಂದಿಯನ್ನು ಜಾಣಪ್ಪರನ್ನಾಗಿ ಮಾಡುತ್ತೀರಿ!**" ಎಂದು ನುಡಿದರು. "ಬುದ್ಧೀ, ತಮ್ಮೆದುರಿಗೆ ನಾನು ಹುಚ್ಚನೇ ಸರಿ. ತಾವು ಅಪ್ಪಣೆ ಪಡಿಸಿದಂತೆ, ನಾನೇನಾದರೂ ಮಾಡುತ್ತಿದ್ದರೆ, ಅದು ತಮ್ಮ ಪಾದಾನುಗ್ರಹವೆಂದು ಬಗೆಯುವೆನು" ಎಂದು ಹುಚ್ಚೇಶ್ವರರು ಆಡಿದರು.

೪. ಕ್ರಿ. ಶ. ೧೯೧೭ರ ಡಿಶೆಂಬರ ಕಡೇ ವಾರ, ದಾವಣಗೆರೆಯೊಳಗೆ ಅಖಿಲ ಭಾರತ ವೀರಶೈವ ಮಹಾಸಭೆಯ ೮ನೆಯ ಅಧಿವೇಶನದ ಚಟುವಟಿಕೆಗಳು, ಮೊನ್ನೆ ಮೊನ್ನೆ ಲಿಂಗೈಕ್ಯರಾದ **ಶ್ರೀ ಜಗದ್ಗುರು ಜಯದೇವ ಮುರಘಾರಾಜೇಂದ್ರ** ಮಹಾಸ್ವಾಮಿಗಳವರ ಮಹಾಸನ್ನಿಧಿಯಲ್ಲಿ ಕೈ. ವಾ. ರಾಜಸಭಾಭೂಷಣ- ಸರ್ ಕೆ. ಪಿ. **ಪುಟ್ಟಣ್ಣ ಶೆಟ್ಟರ** ಘನ ಅಧ್ಯಕ್ಷತೆಯೊಳಗೆ ಭರದಿಂದ ಸಾಗಿದ್ದುವು. 'ಇನ್ನು ಮುಂದೆ ಕಮತಗಿ ಹುಚ್ಚಪ್ಪಯ್ಯನವರು ಮಾತಾಡುವರು' ಎಂದು ಸೂಚಿಸಿದೊಡನೆ, ಹರ-ಗುರು-ಚರಮೂರ್ತಿಗಳ ಸಾಲಿನಲ್ಲಿ ಕುಳಿತಿದ್ದ ಹುಚ್ಚೇಶ್ವರ ಸ್ವಾಮಿಗಳು ಎದ್ದು ಬಂದು, ವೇದಿಕೆಯ ಮೇಲೆ ನಿಂತರು. "ನೀವು ಯಾವ ಪ್ರಸಂಗದ ಮೇಲೆ ಮಾತಾಡುವಿರಿ?" "ತಾವು ಸೂಚಿಸಿದ ಪ್ರಸಂಗದಮೇಲೆ" ಹೀಗೇನು? **'ಆನಂದಂ ಬ್ರಹ್ಮ'**ದ ಮೇಲೆ ಮಾತಾಡಿರಿ- ನಿಮಗೆ ೧೫ ಮಿನಿಟು ಮಾತ್ರ ಕೊಟ್ಟಿದೆ." ಸ್ವಾಮಿಗಳು ಭಾಷಣ ಪ್ರಾರಂಭಿಸಿದರು. ಚಿತ್ರದ ಗೊಂಬೆಯಂತೆ ಜನ ಕೂತು ಕೇಳುತ್ತಿದ್ದಿತು. ಅಧ್ಯಕ್ಷರು 'ಕರೆಗಂಟೆ' ಬಾರಿಸಿದರು. 'ಅವರಿಗೆ ಇನ್ನು ೧೫ ಮಿನಿಟು ಕೊಡಿರಿ.' ಎಂಬ ಕೂಗು

ಜನಜಂಗುಳಿಯಲ್ಲಿ ಕೇಳಿಸಿತು. ಅಧ್ಯಕ್ಷರು ಸಭಿಕರ ಪರವಾಗಿ ಅವರಿಗೆ ಮತ್ತೆ ೧೫ ಮಿನಿಟು ಕೊಟ್ಟರು. ಆ ಮೇಲೆ ಸ್ವತಃ ಅಧ್ಯಕ್ಷರೇ ತಮ್ಮ ಅಧಿಕಾರದಲ್ಲಿ ಪುನಃ ೩೦ ಮಿನಿಟು ವೇಳೆ ಕೊಟ್ಟರು. ಆದರೂ ವಿಷಯ ಮುಗಿಯಲಿಲ್ಲ. ಸಭಿಕರಲ್ಲಿ ಕೇಳಬೇಕೆಂಬ ಕುತೂಹಲವೇನೂ ಕಡಿಮೆಯಾಗಲಿಲ್ಲ. ಕಟ್ಟಕಡೆಗೆ ಜಗದ್ಗುರುಗಳು ಇನ್ನೊಂದು ಗಂಟೆ ಕಾಲ ಹುಚ್ಚಪ್ಪಯ್ಯನವರ ಉಪನ್ಯಾಸವು ನಡೆಯಬೇಕೆಂದು ಅಪ್ಪಣೆ ಕೊಡಿಸಿದರು. ಸಭಿಕರೆಲ್ಲರ ಹೃದಯದ ಬಟ್ಟಲುಗಳು ಆನಂದರಸದಿಂದ ತುಂಬಿ ತುಳುಕಿದವು. **'ಆನಂದಂ ಬ್ರಹ್ಮ'** ದ ಮೇಲೆ ಮಾತನಾಡುವಲ್ಲಿ ಮೇಲಾದವರೆಂದು ಖ್ಯಾತಿವೆತ್ತ ಪುಟ್ಟಣಶೆಟ್ಟರ ಆನಂದವಂತೂ ಎಲ್ಲೆಮೀರಿತು. ಮರುದಿವಸೂ ಅದೇ ವಿಷಯದಮೇಲೆ ಮಾತನಾಡಬೇಕೆಂದು ಪುಟ್ಟಣಶೆಟ್ಟರು ಪೂಜ್ಯ ಜಗದ್ಗುರುಗಳ ಮುಖಾಂತರ ಕೇಳಿಸಿ ನೋಡಿದರು. ಆದರೆ, ಹುಚ್ಚೇಶ್ವರ ಸ್ವಾಮಿಗಳು ಆಗಲೆ ಹುಬ್ಬಳ್ಳಿಯ ಸದ್ಭಕ್ತರೊಬ್ಬರ ಆಗ್ರಹದ ಆಮಂತ್ರಣವನ್ನು ಹಿಡಿದದ್ದರಿಂದ, ಅಲ್ಲಿ ನಿಲ್ಲದೆ ಹುಬ್ಬಳ್ಳಿಗೆ ಪ್ರವಾಸ ಮಾಡಬೇಕಾಯಿತು.



## ೬ ರಸಪ್ರಸಂಗ, ವ್ಯಕ್ತಿತ್ವರಂಗ.

ಹುಚ್ಚೇಶ್ವರ ಸ್ವಾಮಿಗಳು ಊಟದಲ್ಲೇನೂ ನಿರ್ಬಂಧವನ್ನಿಟ್ಟು ಕೊಳ್ಳದೆ, ನಿಯಮಿತವೇಳೆಗೆ ಸರ್ವಸಾಮಾನ್ಯವಾಗಿ ಸಾತ್ವಿಕ ಆಹಾರವನ್ನು ಅಲ್ಪ ಪ್ರಮಾಣದಲ್ಲಿ ಮಾತ್ರ ಸೇವಿಸುತ್ತಿದ್ದರು; ತ್ರಿಕಾಲ ಲಿಂಗಪೂಜೆ ಮಾಡಿ ಕೊಳ್ಳುತ್ತಿದ್ದರು; ದಿನಾಲು ಸಾಯಂಕಾಲ ವಾಯುಸೇವನೆಗೆತಾವು ಎಲ್ಲಿದ್ದರೂ ಹೋಗುತ್ತಿದ್ದರು; ಕೋಟಿಕಲ್ಲಿನ ತಮ್ಮ ತೋಟದ ಹೂ ಗಿಡ ಬಳ್ಳಿಗಳಿಗೆ ಸ್ವತಃ ನಿಂತು ನಸುಕಿನಲ್ಲಿ ನೀರೆರೆಯಿಸುತ್ತಿದ್ದರು; ಅವರು ತಮ್ಮ ಬಂಧುಗಳಿದ್ದಲ್ಲಿ ಇರಲಿಲ್ಲ; ತಾವಿದ್ದಲ್ಲಿ ತಮ್ಮ ಸಂಬಂಧಿಕರನ್ನು ಬರಗೊಡಲಿಲ್ಲ. ಅವರಲ್ಲಿ ಇನ್ನೊಬ್ಬರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಉತ್ತೇಜನ ನೀಡಿ, ಅವರನ್ನು ಮುಂದೆ ತರುವ ಗುಣವೂ ಮನೆಮಾಡಿಕೊಂಡಿತ್ತು. ಕಮತಗಿ

ಶ್ರೀ **ಗದಿಗೆಪ್ಪ ಗವಾಯಿ**ಯನ್ನು ಮುಂಚೆ ಕೈ. ವಾ. ಎಡಹಳ್ಳಿ **ಮಲ್ಲಪ್ಪ ದೇಸಾಯಿ**ಯಲ್ಲಿಟ್ಟು ತುಂಬ ಧನಸಹಾಯ ಮಾಡಿ ಸಂಗೀತ ಶಿಕ್ಷಣ ಕೊಡಿಸಬೇಕೆಂಬ ಅವರ ಮನೋರಥವು ಅವರ ಮುಂದಿನ ಸ್ವಾಮಿಗಳಿಂದ ಕೈಗೂಡಿತು. ಲಿಂಗೈಕ್ಯರಾದ ಅಥಣಿ ಶಿವಯೋಗಿಗಳು, ಬೀಳೂರ ಮಹಾ ಸ್ವಾಮಿಗಳು, ಹಾಗು ಹಾನಗಲ್ಲ ಶ್ರೀ ಶ್ರೀಗಳವರು–ಈ ಮಹಾನುಭಾವತ್ರ ಯರಲ್ಲಿ ಹುಚ್ಚೇಶ್ವರರು ಪೂಜ್ಯಭಾವನೆಯುಳ್ಳವರಾಗಿ, ಅವರನ್ನು ಕ್ರಮ ವಾಗಿ ಅಜ್ಜ, ಅಪ್ಪ, ಅಣ್ಣನವರೆಂದು ಗೌರವಿಸುತ್ತಿದ್ದರು. ಅವರ ಶೀಲ-ಸ್ವಭಾವಾದಿಗಳನ್ನು ಇನ್ನೂ ವಿಶದವಾಗಿ ಅಭ್ಯಾಸಿಸುವದಾದರೆ, ಅವರ ಜೀವನದಲ್ಲಿ ನಡೆದುಹೋದ ಕೆಲವು **'ರಸನಿಮಿಷ'** ಗಳನ್ನು ಸ್ಮರಿಸಿ ಕೊಳ್ಳೋಣ:

೧. ಬಾಗಿಲಕೋಟೆಯಿಂದ ಒಂದು ವರ್ಷ ಕೈ. ವಾ. ಮೋಟಗಿ ಘಟ್ಟಿ ಬಸವಪ್ಪ, ಕೈ. ವಾ. ಕಿಣಗಿ ಬಸವಲಿಂಗಪ್ಪ ಮುಂತಾದವರ ಸಂಗಡ ಹುಚ್ಚಪ್ಪಯ್ಯನವರು ಶ್ರೀಶೈಲಯಾತ್ರೆಗೆ ಹೊರಟರು. ತಾವು ಎಲ್ಲಿಗೆ ಹೋದರೂ ವಿದ್ಯಾರ್ಥಿಗಳು ಮಕ್ಕಳಂತೆ ಹಿಂದೆ ಇದ್ದವರೆ. ಬೆಟ್ಟ ಬಂದಿತು. ಸ್ವಾಮಿಗಳಿಗೋಸ್ಕರ ಪ್ರತ್ಯೇಕ 'ಡೋಲಿ' ವ್ಯವಸ್ಥೆ ನಡೆದಾಗ, ಸ್ವಾಮಿಗಳು "ಪೈಯಲ್ಲಿ ನೆಣವಿದೆ. ಸುಮ್ಮಸುಮ್ಮನೆ ನಮಗಾಗಿ ೭೦ರೂ. ಯನ್ನು ಯಾಕೆ ಖರ್ಚುಮಾಡುವಿರಿ? ಅದೇ ಹಣವನ್ನು ಬಡವಿದ್ಯಾರ್ಥಿಗಳಿಗೋಸ್ಕರ ತೆಗೆದಿ ಡಿರಿ" ಎಂದು ವಿದ್ಯಾರ್ಥಿಗಳ ಕೂಡ ನಗುತ್ತ ನಲಿಯುತ್ತ ಪಾದಚಾರಿಗ ಳಾಗಿಯೇ ಸಾಗಿದರು. ಮಿಕ್ಕವರೂ ನಡೆದೇ ಬರಬೇಕಾಯಿತು. ಗಂಗನ ಪಳ್ಳಿಗೆ ಬಂದಿರಬೇಕು. ಅಶಕ್ತನಾದ ಬಸವಲಿಂಗಪ್ಪನಿಗೆ ಸಾಕು ಬೇಕಾಯಿತು. ಆಗಮಾತ್ರ ಸ್ವಾಮಿಗಳು ಅವನದೆಸೆಯಿಂದ ಡೋಲಿಯನ್ನೇರಿದರು.

೨. ಶ್ರೀಶೈಲ ಪ್ರದೇಶದಲ್ಲಿ ಕೃಷ್ಣೆಯು ಗುಡ್ಡಗಳೆರಡರ ನಡುವೆ **'ಪಾತಾಳಗಂಗೆ'**ಯಾಗಿ ಹರಿದಿದ್ದಾಳೆ. ಹಲವಾರು ಸೋದರಿಯರು ಬಂದು ಅಲ್ಲಿ ಆಕೆಯನ್ನು ಕೂಡಿಕೊಂಡಿದ್ದಾರೆ. ಆ ಸ್ಥಾನದಲ್ಲಿ ಈಸಿ ಆಚೆಗೆ ಹೋಗಿ ಬರುವದು ಎಂತಹ ಬಲಾಢ್ಯನಿಗೂ ದುಸ್ಸಾಧ್ಯವಾದ ಮಾತೆ. ಹುಚ್ಚಪ್ಪ ಯ್ಯನವರು ಅದರಲ್ಲಿ ಈಸುಬಿದ್ದು ಪಾರಾಗಿ ಬಂದರು. ಯಾತ್ರಿಕರು ಅವರ ಸಾಹಸ-ಧೈರ್ಯಗಳಿಗೆ ಬಹಳ ಮೆಚ್ಚಿದರು.

೩. ಶ್ರೀಶೈಲದಿಂದ ತಿರುಗಿ ಬರುವಾಗ ದಾರಿಯಲ್ಲಿ ಮಾರಿಕಾಬೇನೆ ಹಬ್ಬಿತ್ತು. ತಿರುಗಿ ಊರಿಗೆ ಹೊರಟ ಇಬ್ಬರು ಕಂಬೀ ಅಯ್ಯನವರಲ್ಲಿ ಒಬ್ಬನು ಸತ್ತಿದ್ದನು. ಅವನ ಜೊತೆಗಾರನೂ ಸತ್ತಿರುವನೆಂದೇ ಜನ ಅವನನ್ನು ಎತ್ತರ-ಪಿತ್ತರವಾಗಿ ಮಣ್ಣಲ್ಲಿ ಮುಚ್ಚಿ ಹೋಗಿದ್ದರು. ಹೆಣ ಪೊಳ್ಳಿಗೆ ಬಿದ್ದಿರಬೇಕು. ಆ ಗೃಹಸ್ಥ ಪೂರಾ ಸತ್ತಿರಲಿಲ್ಲವೇನೊ; ಗಾಳಿತುಂಬಿ ಅವನಿಗೆ ಜೀವಬಂದಂತಾಯಿತೇನೊ. ಅವನ ಒಂದು ಕೈ ಮೇಲೆದ್ದು ಕರೆದಂತೆ ಮಾಡುತ್ತಿತ್ತು. ಸ್ವಾಮಿಗಳು ನೋಡಿ, ಅಲ್ಲಿಗೆ ಧಾವಿಸಿ, ಮಣ್ಣನ್ನು ಗೆಬರಿಸಿ ನೋಡುತ್ತಾರೆ: ನರಳುತ್ತ ಬಿದ್ದ–ಜೀವನ್ಮೃತ ವ್ಯಕ್ತಿ ಕಣ್ಣಿಗೆಬಿದ್ದನು. ಅವನನ್ನು ಉಪಚರಿಸಿ ಬಂಡಿಯಲ್ಲಿ ಹಾಕಿಸಿ, ಸ್ವಾಮಿಗಳು ತಾವೂ ವಿದ್ಯಾರ್ಥಿಗಳೊಂದಿಗೆ ಕಾಲ್ನಡಿಗೆಯಿಂದ ಸಾಗಿದರು; ಮುಂದೆ ಆ ವ್ಯಕ್ತಿಯನ್ನು ಅವನ ಊರಾದ ಜಮಖಂಡಿಗೆ ಕಳಿಸಿಕೊಟ್ಟರು.

೪. ಕೋಟೆಕಲ್ಲ ಪಾಠಶಾಲೆಯಲ್ಲಿ ವಿದ್ಯಾರ್ಥಿಗಳು ಪ್ರೀತಿಗಾಗಿ ಒಂದು ಹೆಣ್ಣು ಗಿಳಿ ಸಾಕಿ, ಅದಕ್ಕೆ 'ಚಂಪಿ' ಎಂದು ಕರೆಯುತ್ತಿದ್ದರು. ಸ್ವಾಮಿಗಳಿಗೂ ಆದರ ಮೇಲೆ ಅಕ್ಕರತೆಯಿತ್ತು. ಭಕ್ತರು ವಿದ್ಯಾರ್ಥಿಗಳಿಗೆ ಕೊಟ್ಟ ಹಣ್ಣು–ಹಂಪಲಗಳಲ್ಲಿ ಚಂಪಿಗೂ ಒಂದು ಪಾಲು ಇದ್ದದ್ದೆ; ಅದೂ ಒಂದು ತಮ್ಮ ವಿದ್ಯಾರ್ಥಿನಿಯೆಂದೆ ಸ್ವಾಮಿಗಳ ಭಾವನೆ. ಚಂಪಿ ವಯಸ್ಸಿಗೆ ಬಂದು, ಗಂಡು ಗಿಳಿಯೊಂದರ ಸಹವಾಸ ಬಯಸಿದುದನ್ನು ತಿಳಿದಾಗ, ಸ್ವಾಮಿಗಳು ಬಳಿಯಲ್ಲಿದ್ದ ವಿದ್ಯಾರ್ಥಿಗಳನ್ನುದ್ದೇಶಿಸಿ, 'ನೋಡಿದಿರಾ, ಪಕ್ಷಿಗಳಲ್ಲೂ ಸಂಸಾರ ಭ್ರಮೆಯೆಷ್ಟಿದೆ? ಮನುಷ್ಯನ ಪಾಡೇನು!' ಎಂದು ಮೊದಲಾಗಿ ಅಪ್ರತ್ಯಕ್ಷ ನೀತಿಯನ್ನು ಬೋಧಿಸಿ, ಪಂಜರದಿಂದ ಚಂಪಿಯ ಬಿಡುಗಡೆ ಮಾಡಿದರು. ಸ್ವಾಮಿಗಳು ಅಡ್ಡಾಡಲಿಕ್ಕೆ ಹೋದಾಗ, 'ಚಂಪಿ' ಎಂದು ಕರೆದೊಡನೆ ಅದು ಅವರ ಹೆಗಲ ಮೇಲೆ ಒಂದಿಷ್ಟು ಕುಳಿತು ಹೋಗುತ್ತಿತ್ತು.

೫. ಕೋಟೆಕಲ್ಲ ಮಠದೊಳಗೆ ಸ್ವಾಮಿಗಳ ಪುರಾಣ-ಪ್ರವಚನ ನಡೆದಿತ್ತು. ಎಲ್ಲಕ್ಕೂ ಮುಂಚೆ ಬಂದು, ಎದುರಿಗೆ ಕೂಡ್ರುವವರೆಂದರೆ, ಕೈ.ವಾ. ಹಲಕಾಟೆಪ್ಪ ಮೊರಬದ ಮತ್ತು ಕೈ.ವಾ. ಗುರಪ್ಪ ಸಂಪಗಾಂವಿ. ಮುದುಕಗುರಪ್ಪನು ಏಕೋ ತೂಕಡಿಸುತ್ತಿದ್ದನು. ಪುರಾಣ ಮುಗಿದ ಮೇಲೆ ಸ್ವಾಮಿ

ಗಳು ಗುರಪ್ಪನಿಗೆ "ನಾವು ಇಂದು ಪುರಾಣ ಹೇಳಲಿಲ್ಲ" ಎಂದರು- ಆಗ ಗುರಪ್ಪನು "ಹೇಳಿದಿರಿ, ಬುದ್ಧೀ" ಎಂದು ಅಂದನು. "ಹಾಗಾದರೆ ಏನೇನು ಹೇಳಿದೆವು ಹೇಳು" ಎಂದು ಸ್ವಾಮಿಗಳು ಪ್ರಶ್ನಿಸಿದ ಕೂಡಲೆ ಗುರಪ್ಪನು ಮೌನ ತಾಳಿದನು. ಆಗ ಸ್ವಾಮಿಗಳು ಬೊಳ್ಳೆಂದು ನಕ್ಕುಬಿಟ್ಟರು; ಗುರಪ್ಪನೂ- ಅವನ ಜೊತೆಗಿದ್ದವರೂ ನಕ್ಕರು.

೬. ಕೋಟಿಕಲ್ಲ ಮಠದಲ್ಲಿ ಸ್ವಾಮಿಗಳು ತಮ್ಮ ಪ್ರಾತಃಕಾಲದ ಶಿವಪೂಜೆ ತೀರಿಸಿಕೊಂಡು, ಅದೇ ಹೊರಗೆ ಬಂದು, ಪೋಷಾಕು ಹ್ಹಾಕಿಕೊಳ್ಳುತ್ತಿದ್ದರು. "ಬುದ್ಧೀ ಉತ್ತಮ ಪಲ್ಲಂಗ ಬಂದಿದೆ- ಕೊಂಡುಕೊಳ್ಳುವಿರಾ? "ಎಂದು ಹಲಗಲಿ ಶರಣಪ್ಪ ಹಾಗೂ ಹುನಗುಂದ ವೀರಭದ್ರಪ್ಪ ಓಡಿ ಬಂದು ಸ್ವಾಮಿಗಳಿಗೆ ಅರಿಕೆ ಮಾಡಿಕೊಂಡರು. ಸ್ವಾಮಿಗಳಾದರೋ ಆಂಗಳಕ್ಕೆ ಬಂದು ಮುಗುಳ್ನಗೆಯಿಂದ "ಇದು ಮಾಯದ ಪಲ್ಲಂಗ! ವಿರಕ್ತರಿಗೆ ಸಲ್ಲದು-" ಎಂದಾಡಿದ ಮಾತನ್ನು ಕೇಳಿ, ಪಲ್ಲಂಗ ಹೊತ್ತು ತಂದವರು ನಕ್ಕು ಹೊರಟು ಹೋದರು.

೭. ಮುಂಜಾನೆ ಮೂರು ತಾಸು ಹೊತ್ತೇರಿದೆ. ಕೋಟಿಕಲ್ಲ ಮಠದಲ್ಲಿ ಸ್ವಾಮಿಗಳು ಪಾಠ ಹೇಳುತ್ತ ಕುಳಿತಿದ್ದರು. ಮಗ್ಗುಲಲ್ಲಿ ಕೊಂಚ ದೂರಕ್ಕೆ ಶ್ರೀ ಮೋಟಗಿ ಸಂಗಪ್ಪ ಮುಂತಾದ ಒಬ್ಬಿಬ್ಬರು ಭಕ್ತರು ಇದ್ದರು. ಆಗ ಮೈಸೂರ ಸೀಮೆಯ ಆಚಾರಿಯೊಬ್ಬನು ಬಂದು ನಮಸ್ಕರಿಸಿ, "ಸ್ವಾಮೀ ಮಗನ ಮುಂಜಿವೆಗೆ ೨೦೦ ರೂ. ಯ ಸಹಾಯ ಮಾಡಿರಿ" ಎಂದು ಮೊದಲಾಗಿ ಕರುಳು ಕರಗುವಂತೆ ಕೇಳಿಕೊಂಡನು. "ಎಂಥ ವೇಳೆಯಲ್ಲಿ ಬಂದಿರಿ, ಆಚಾರ್ಯರೆ? ಒಳ್ಳೇದಾಗಲಿ. ಶಿವನಿಚ್ಛೆ!" ಎಂದು ಸ್ವಾಮಿಗಳು ಹಸನ್ಮುಖದಿಂದ ಆಡುವಷ್ಟರಲ್ಲೆ, ಪಟ್ಟದಕಲ್ಲಿಂದ ಅವರ ಹೊಲ ಮಾಡುತ್ತಿದ್ದ ರೈತನೊಬ್ಬನು ಬಂದು ಬುದ್ಧೀ ತಮ್ಮ ಲಾ ವ ಣೀ ರೂಪಾಯಿ ತಕ್ಕೊಳ್ಳಿರಿ" ಎಂದು ತಾನು ತಂದ ೨೦೦ ರೂ. ಯನ್ನು ಸ್ವಾಮಿಗಳ ಮುಂದೆ ಸುರುವಿದನು. ಅವೇ ರೂಪಾಯಿಗಳನ್ನೆಲ್ಲ ಆಗಿಂದಾಗ ಬ್ರಾಹ್ಮಣನ ಉಡಿಯಲ್ಲಿ ಹಾಕಿ ಆಶೀರ್ವದಿಸಿ ಕಳಿಸಿದರು.

೮. ಯುಗಾದಿ ಪಾಡ್ಯದ ದಿನ, ಸ್ವಾಮಿಗಳ ಆಳುಮಗ- ಭೀಮಪ್ಪನು ಗೊತ್ತಿಲ್ಲದೆ, ಕಮತಗಿ ಗಿರಿಮಠದ ಗುಡ್ಡದ ಮೇಲಿನ ಬೇವಿನ ಗಿಡ

ರೆಯನ್ನೇರಿ, ಶಿರೂರಿಗೆ ಹೋಗಿ, ಆ ಕಂದನ ಮೈಮೇಲೆ ಕೈಯಾಡಿಸಿ, ಅವನ ಸ್ನೊಮ್ಮೆ ಕಣ್ತುಂಬ ನೋಡಿದರು. ಮೂರು ದಿನದಲ್ಲಿ ಅವನ ಹೊಟ್ಟೆಯೊಳಗಿನ ಜ್ವರದ ಗಡ್ಡೆಯೊಡೆದು ಪೂರ್ಣ ಗುಣವಾಯಿತು. ಮುಂದೆ ಅದೇ ಹುಡುಗನೇ ದೊಡ್ಡವನಾದಮೇಲೆ ಸ್ವಾಮಿಗಳವರ ಕೃಪಾಶೀರ್ವಾದದಿಂದ ಕಲಿತು ಜಾಣನಾಗಿ, ಬಿ. ಇ-ಪರೀಕ್ಷೆ ಕೊಟ್ಟು, ಇದೀಗ ಬೆಳಗಾಂವಿಯಲ್ಲಿ **ಮಹಾ ಚಾ ಇಂಜನಿಯರ** ಎಂದು ಪ್ರಸಿದ್ಧನಾಗಿರುವನು.

೪. ಸ್ವಾಮಿಗಳು ಒಂದುಸಲ ಬಾಗಿಲಕೋಟೆಗೆ ದಯಮಾಡಿಸಿದಾಗ ವೈಜಾಪುರದವರ ಮನೆಗೆ ಹೋಗಿದ್ದರು. ಗದಿಗೆಪ್ಪನಿಗೆ ಬಹಳ ಜಡ್ಡಾಗಿತ್ತು. ಅವನು ಸ್ವಾಮಿಗಳಿಗೆ ಪ್ರೀತಿಯ ಭಕ್ತನೇನೋ ನಿಜ. ಆದರೆ ಸ್ವಾಮಿಗಳು ಆತನನ್ನೊಂದುಬಾರಿ ದಿಟ್ಟಿಸಿ ನೋಡಿ, "ಭಕ್ತಾ, ನೀನು ಎಲ್ಲಿ ತೋರಿಸಿದರೂ ಗುಣಮುಖನಾಗುವದಿಲ್ಲ. ನಿನಗೆ ಶಿವನ ಅಪ್ಪಣೆಯಾಗಿದೆ!" ಎಂದು ನುಡಿದರು. ಅಂದೇ ಆ ಭಕ್ತನು ತೀರಿದನು.

೫. ಕಮತಗಿ ಶ್ರೀ **ಅಚನೂರ ಬಸೆಟ್ಟೆಪ್ಪನು** ೧೦-೧೧ ವರ್ಷದ ಹುಡುಗನಿದ್ದಾಗ, ಭ್ರಮಿಷ್ಟನಂತೆ ಇದ್ದನು. ಅವನ ತಂದೆಯು ಒಮ್ಮೆ ಸ್ವಾಮಿಗಳವರ ದರ್ಶನಕ್ಕೆ ಆ ತರುಳನನ್ನು ಜೊತೆಗೆ ಕರಕೊಂಡು ಹೋಗಿದ್ದನು. ಸ್ವಾಮಿಗಳವರು ಆ ಬಾಲಕನ ತಲೆಯಮೇಲೆ ತಮ್ಮ ವರದ ಹಸ್ತವನ್ನಿಟ್ಟರು. ಅಂದಿನಿಂದ ಅವನ 'ಅರೆಹುಚ್ಚು' ಹೇಳಹೆಸರಿಲ್ಲದಾಯಿತು. ಮುಂದೆ ಅವನು ಕಲಿತು ಜಾಣನಾಗಿ, ಇದೀಗ ಶ್ರೀ ಶ್ರೀಗಳವರ ಕೃಪಾಶೀರ್ವಾದದಿಂದ **ಕವಿಯೆನಿಸಿಕೊಂಡಿರುವನು.**

ಇನ್ನು ಹುಚ್ಚೇಶ್ವರರ **ಲಿಂಗೈಕ್ಯದ** ವಿಷಯವಾಗಿ ತಿಳಿದುಕೊಳ್ಳ ಬೇಕೆಂದರೆ, ಹುಚ್ಚೇಶ್ವರರು ವೈಜಾಪುರ ಸಂಗಪ್ಪನ ತಾಯಿ **ಬಸವಲಿಂಗಮ್ಮ**ನಿಗೆ ಜಡ್ಡಾದಾಗ, ಆಕೆಗೆ ಪಾದದರ್ಶನ ಕೊಡಲಿಕ್ಕೆಂದು ಬೇವೂರಿಂದ ಗಂಜಿಹಾಳಿಗೆ ದಯಮಾಡಿಸಿದರು; ಪಾದದರ್ಶನವನ್ನೂ ಕೊಟ್ಟರು. ಆದರೆ, ಅದೇದಿನ, ಸ್ವಾಮಿಗಳವರಿಗೆ **'ಇನ್‌ಫ್ಲೂಯೆಂಜಾ'** ಕೂಡಿತು. ಕ್ರಿ. ಶ. ೧೯೧೮ ರಲ್ಲಿ 'ಇನ್‌ಫ್ಲೂಯೆಂಜಾ' ಬೇನೆಯು ಇಡೀ ಭಾರತದಲ್ಲಿ ೧೫ ದಿನದೊಳಗೆ ಹಬ್ಬಿತೆಂದೂ, ಮತ್ತು ೧೫-೨೦ ದಿನದಲ್ಲಿ ೬೦ ಲಕ್ಷ ಜನರು ಸತ್ತ

ರಿಂದೂ ವರದಿಯಾಗಿದೆ. ಸ್ವಾಮಿಗಳು ಮರುದಿನ ಸೋಮವಾರ ಮಧ್ಯಾಹ್ನ ೬ ಸಾಸಿಗೆ ಕಪುತಗಿಗೆ ಬಂದರು. ಮಂಗಳವಾರ ಗುಳೇದಗುಡ್ಡದ ಪ್ರಮುಖ ಭಕ್ತರು 'ಮೋಟಾರು, ತಕ್ಕೊಂಡು ಬಂದು, ಸ್ವಾಮಿಗಳವರನ್ನು ಒತ್ತಾಯದಿಂದ ಕೋಟಿಕಲ್ಲಿಗೆ ಕರೆದೊಯ್ಯುವಾಗ, ಮಾರ್ಗದೊಳಗೆ ಇಂಜಗನೇರಿ ಹತ್ತಿರ ಸ್ವಾಮಿಗಳಿಗೆ ಅಪ್ರಸಾದವಾಯಿತು. ಊರಿಗೆ ಮುಟ್ಟಿದ ಬಳಿಕ, ಸ್ವಾಮಿಗಳು ಬೇಡವೆಂದರೂ, ಭಕ್ತರು ಹೆಗಡಿ ಮಲ್ಲಪ್ಪ, ಹಂಸನೂರ 'ಮಾಸ್ತರ'–ಇವರೀರ್ವರಿಂದ ಔಷಧ ಕೊಡಿಸಿದರು. ಆಗ ಸ್ವಾಮಿಗಳವರು, "ಬೇನೆಗೆ ಔಷಧವುಂಟು; ಸಾವಿಗೆ ಔಷಧವುಂಟೇ? ನಮಗೆ ಹುಷಿಕೇಶನ ಅಪ್ಪಣೆಯಾಗಿದೆ. ವಿದ್ಯಾರ್ಥಿಗಳಲ್ಲಿ ಒಬ್ಬಿಬ್ಬರಿಗೆ ಈ ಬೇನೆ ಅಂಟಿದೆಯೆಂದು ಕೇಳುತ್ತೇನೆ. ಅವರಿಗೆ ಔಷಧೋಪಚಾರ ಮಾಡಿಸಿರಿ. ಅವರ ಆನಂದವೇ ನನ್ನ ಆನಂದ!'' ಎಂದು ನಗುನಗುತ್ತಲೆ ಮಾತನಾಡಿದರು. ಅಂದು ಶನಿವಾರ. ಇನ್ನೂ ದೀಪಾರಾಧನೆ ಯಾಗಿರಲಿಲ್ಲ. ಸ್ವಾಮಿಗಳು ಕೋಟಿಕಲ್ಲಲ್ಲಿ ಊರೊಳಗಿನ ಮಠದ ಪಡಸಾಲೆಯಲ್ಲಿ ಹಾಸಿಗೆ ಹಿಡಿದು ಮಲಗಿದ್ದರು. ಅಲ್ಲಿಗೆ ಒಂದು ಎತ್ತು ಮೂರು ಪಾವಟಿಗೆ ಏರಿ ಒಮ್ಮೆಲೆ ಮೇಲೆಬಂತು. ಕುಳಿತ ಭಕ್ತರು ಅದನ್ನು ಹೊಡೆಯಹೋದರು. ಸ್ವಾಮಿಗಳು ಚಟ್ಟನೆ ಎದ್ದು ಕುಳಿತು, "ಹೊಡೆಯಬೇಡಿರಿ. ಇದು ನನ್ನನ್ನು ಕರೆಯಲಿಕ್ಕೆ ಬಂದಿದೆ!" ಎಂದರು. ಆ ಎತ್ತು ಸ್ವಾಮಿಗಳ ದರ್ಶನ ತಕ್ಕೊಂಡು ಕೂಡಲೆ ಹೊರಳಿತು. ಮಠದ ಬಾಗಿಲಿಗೆಬಂದು, ಹೊರ ಅಂಗಳದಲ್ಲಿ ಮಾಯವಾಯಿತು. ಆಗ ಮಾತ್ರ ಭಕ್ತಾದಿಗಳಿಗೆ ಸ್ವಾಮಿಗಳು ತಮ್ಮನ್ನು ಕೈ ಬಿಡುವರೆಂದು ಮನದಟ್ಟಾಯಿತು. ಸ್ವಾಮಿಗಳು ಲಿಂಗೈಕ್ಯರಾಗುವ ದಿನ ನಾಳೆಯಂತೆ ಇತ್ತು. ಇತ್ತ ಹಳ್ಳೂರ ಸದ್ಭಕ್ತ–ಕೈ. ವಾ. ಬಳಿಗಾರ ಅಂದಾನೆಪ್ಪನ ಕನಸಿನಲ್ಲಿ, "ಭಕ್ತಾ, ನನ್ನ ದರ್ಶನಕ್ಕೆ ಈಗಿಂದೀಗ ಕೋಟಿಕಲ್ಲಿಗೆ ಹೊರಡು!" ಎಂದು ಯಾರೋ ಹೇಳಿ, ಬಡಿದು ಎಬ್ಬಿಸಿದಂತಾಯಿತು. ಇನ್ನೂ ರಾತ್ರಿ ಇರುವಾಗಲೇ ಅವನು ಹೊರಟು ಕೋಟಿಕಲ್ಲಿಗೆ ಬಂದನು. ಅತ್ತ ಸ್ವಾಮಿಗಳು ಅವನು ಬರುವ ಸೂಚನೆ ಮಾಡಿದ್ದರು. ಅವರು ಶಕ ೧೮೪೦ ಆಶ್ವೀನ ಶು. ೧೦ (ವಿಜಯದಶಮಿ) ಸೋಮವಾರ ದಿ. ೧೪-೧೦-೧೯೧೮ ರಂದು ಪ್ರಾತಃಕಾಲ ಶ್ರವಣಾ ನಕ್ಷತ್ರದಲ್ಲಿ ಲಿಂಗೈಕ್ಯರಾದರು. 'ಶರಣರ ಇರುವು ಮರ

**ಣದಲ್ಲಿ'** ಎಂಬಂತೆ, ಅತ್ತ ಅವರು ಲಿಂಗದೊಳಗಾಗುವ ಸಮಯಕ್ಕೆ, ಕರ್ತೃ ಗದ್ದಿಗೆಯ ಎದುರಿಗಿರುವ **ಹುಣಿಸೆ ಮರದ** ತುದಿಯಿಂದ ಒಂದು ಕೊಡದಷ್ಟು ನೀರು ಎರಡುಧಾರೆಯಾಗಿ ಒಮ್ಮಿಂದೊಮ್ಮೆ ಕೆಳಗೆ ಬಿದ್ದು ದನ್ನೂ, ಮತ್ತು ಇತ್ತ ಹುಚ್ಚೇಶ್ವರರು ಮುಂಚೆಯೆ ಕುರುಹು ತಿಳಿಸಿದಂತೆ, ಕಮತಗಿ ಮಠದ ಕಿತ್ತಲಬಾವಿಯ ಬಳಿಯಿದ್ದ ಪತ್ರಿ ಗಿಡವು ಒಣಗುತ್ತ ನಡೆದು ನಾಶವಾಯಿತೆಂದೂ ಕಣ್ಣಾರೆ ಕಂಡವರು ಈಗಲೂ ಹೇಳುತ್ತಾರೆ.

ಒಟ್ಟಾರೆ, ಸರಸ್ವತಿಯ ಕಂಠಾಭರಣದಲ್ಲಿ ಥಳಥಳಿಸುತ್ತಿದ್ದ ದಿವ್ಯಾಭರಣವೊಂದು ಕಳಚಿತು! ವೈರಾಗ್ಯ ದೇವಿಯ ಕಂಠ ಮಾಲೆಯಲ್ಲಿ ಕಂಗೊಳಿಸುತ್ತಿದ್ದ ಅನರ್ಘ್ಯ ರತ್ನವೊಂದು ಕಣ್ಮರೆಯಾಯಿತು!! ಹುಚ್ಚೇಶ್ವರರ ನಿಧನದಿಂದ ಕನ್ನಡ ನಾಡಿಗೆ ತುಂಬಿಬಾರದ ಹಾನಿಯುಂಟಾಯಿತು!!! ಆ ಸ್ಮಾರಕವಾಗಿ, ಅವರ ಶಿಷ್ಯರಾದ ವಿದ್ಯಾ ವಾಚಸ್ಪತಿ ವಿಜಾಪುರ **ಶ್ರೀ ಶಂಭುಲಿಂಗ ಸ್ವಾಮಿಗಳು** ಮೂರಂಕಿನ **ಕನ್ನಡ ನಾಟಕ**ವನ್ನು ರಚಿಸಿದರು; ಪರಮ ಪೂಜ್ಯ **ಯಕ್ಕುಂಡಿ ಗುರುಶಿದ್ಧದೇವರು** ಹುಚ್ಚೇಶ್ವರರ ಲಿಂಗೈಕ್ಯದ ಬಗೆಗಿರುವ **ಸಂಸ್ಕೃತ ಪಂಚಕ**ವನ್ನು ಪ್ರಕಟಿಸಿದರು. ಆ 'ಪಂಚಕ'ದಲ್ಲಿನ **ಒಂದು ಪದ್ಯ**ವನ್ನು ಮಾತ್ರ ಮಾದರಿಗಾಗಿ ಕೊಟ್ಟಿದ್ದೇವೆ

ಭಗ್ನಂ ಸದ್ಗುಣಮೇರು ಶೃಂಗಮಚಿರಾದಸ್ತೋಽದ್ಯ ಧಾಮ್ನಾನಿಧಿಃ।
ಶೀರ್ಣಃ ಪಂಡಿತ ಮೌಲಿಮಂಡನ ಮಣಿರ್ಧ್ವಸ್ತಃ ಪ್ರಬೋಧಾಶ್ರಯಃ॥
ಶುಷ್ಕಶ್ಶೀಲ ವಿಚಾರ ಸತ್ವ ಜಲಧಿ ಶ್ಶೂನ್ಯಾದಿಶಸ್ಸರ್ವಥಾ।
ಯಾತೇ ಹಾ ಹರಪಾದ ಪಂಕಜ ಪದಂ ಹುಚ್ಚೇಂದ್ರ ಯೋಗೀಶ್ವರೇ॥

